॥ ಶ್ರೀಃ ॥

ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ,

ಉಡುಪಿ.

# ಉಡುಪಿಕ್ಷೇತ್ರಮಹಿಮಾ

ತೃತೀಯಮುದ್ರಣ ೧೦೦೦.

ಶ್ರೀಕೃಷ್ಣಮುದ್ರಣಾಲಯ, ಉಡುಪಿ.

1932.

ಬೆಲೆ: ೦—೫—೦.

# ಪ್ರಸ್ತಾವನೆ.

**ಸ**ದ್ಧರ್ಮದಲ್ಲಿ ಶ್ರದ್ಧಾಳುಗಳು ಕರ್ತವ್ಯಗಳನ್ನು ಜ್ಞಾನಪೂರ್ವಕವಾಗಿಯೇ ಆಚರಿಸುವುದು ಉತ್ತಮವಾದುದರಿಂದ ಸದ್ಧರ್ಮಗಳಲ್ಲಿ ಪ್ರಾಥಮಿಕಗಳಾದ ತೀರ್ಥಕ್ಷೇತ್ರಯಾತ್ರೆಗಳು ಆ ಕ್ಷೇತ್ರಕಥೆಗಳನ್ನು ತಿಳಿಯದೆ ಆಚರಿಸಲ್ಪಟ್ಟರೆ ನಿಷ್ಫಲಗಳಾಗುವುವು. ಅಲ್ಪವಾದ ಈ ಮಾನುಷಾಯುಷದಲ್ಲಿ ಸರ್ವಕ್ಷೇತ್ರಯಾತ್ರೆಯು ಅಸಾಧ್ಯವಾದುದರಿಂದ ಸರ್ವಕ್ಷೇತ್ರಯಾತ್ರಾಫಲದಾಯಕವಾದೊಂದು ಉತ್ತಮ ಕ್ಷೇತ್ರಯಾತ್ರೆಯನ್ನಾದರೂ ಮನುಷ್ಯನು ಆಚರಿಸಬೇಕಾದ ಕಾರಣ ಸರ್ವೋತ್ತಮನಾದ ಶ್ರೀಕೃಷ್ಣನ ಕ್ಷೇತ್ರವಾದ ರೂಪ್ಯಪೀಠ (ಉಡುಪಿ) ಪಟ್ಟಣವು ಸರ್ವಕ್ಷೇತ್ರೋತ್ತಮವು ಸರ್ವಕ್ಷೇತ್ರಯಾತ್ರಾಫಲಪ್ರದವು. ವಿಶೇಷತಃ ಮಾಧ್ವರಿಗೆ ಇದಕ್ಕಿಂತ ಉತ್ತಮವಾದಿನ್ನೊಂದು ಕ್ಷೇತ್ರವಿಲ್ಲ. ಇಲ್ಲಿ ಶ್ರೀಕೃಷ್ಣನು, **“ಅದೃಶ್ಯೋಽಸೌ ರೂಪ್ಯಪೀಠೇ ದೃಶ್ಯಸ್ತು ಬದರೀ-ತಟೇ”** ಎಂಬ ವಚನಾನುಸಾರವಾಗಿ ಸಾಕ್ಷಾನ್ಮಧ್ವಾಚಾರ್ಯರು, ಗಂಗಾಸಾನ್ನಿಧ್ಯಯುಕ್ತಗಳಾದ ತೀರ್ಥಗಳು **“ಸರ್ವಂ ಗೋಕರ್ಣಮಂಡಲೇ”** ಎಂಬಂತೆ ಅನ್ಯತ್ರ ಒಂದೊಂದಾಗಿರುವ ಸಮಸ್ತವೂ ಇಲ್ಲಿ ಕೂಡಿರುತ್ತದೆ, ಅಲ್ಲದೆ ಜ್ಞಾನದಿಂದಲೇ ಮೋಕ್ಷವು ಲಭಿಸತಕ್ಕದ್ದಾದರೂ ಪ್ರಾಣಿಮಾತ್ರಕ್ಕೆ ಕರ್ಮತ್ಯಾಗವು ಅಸಾಧ್ಯವಾದಕಾರಣ ಕರ್ಮವನ್ನು ಫಲಾಪೇಕ್ಷೆ ಇಲ್ಲದೆ ಮನುಷ್ಯರು ಆಚರಿಸಬೇಕೆಂಬರ್ಥವನ್ನು ತಮ್ಮ ಶ್ರೀಕೃಷ್ಣಪೂಜಾದಿ ಸತ್ಕರ್ಮಗಳಿಂದ ಜನರಿಗೆ ಬೋಧಿಸಲುದ್ಯುಕ್ತರಾದ ಅಷ್ಟಶ್ರೀಪಾದಂಗಳವರ ಸದಾಚರಣ ಸಂಪ್ರದಾಯಗಳನ್ನೂ ಅವಶ್ಯ ತಿಳಿಯಬೇಕಾದುದರಿಂದ ಅಂತಹ ಆಚರಣಕ್ರಮದಿಂದೊಡಗೂಡಿದ ಈ ಕ್ಷೇತ್ರಮಹಿಮೆಯ ಜ್ಞಾನವು ಸರ್ವರಿಗೂ ಸುಲಭದಿಂದಾಗುವಂತೆ ಸ್ಕಾಂದಪುರಾಣದಲ್ಲಿರುವ ರೂಪ್ಯಪೀಠಮಾಹಾತ್ಮ್ಯಾಧಾರದಿಂದ ಸಂಪ್ರದಾಯಪದ್ಧತಿ, ಉಡುಪಿ ಶ್ರೀಕೃಷ್ಣಚರಿತ್ರೆ, ಗ್ರಾಮಪದ್ಧತಿ ಇವುಗಳ ಪ್ರಮೇಯವನ್ನೂ ಪುರಾಣದಲ್ಲಿ ತೋರದೆ ಪ್ರಸಿದ್ಧಿಯಲ್ಲಿರುವ ಕ್ಷೇತ್ರ

ಚರಿತ್ರೆಗಳನ್ನೂ ವೃದ್ಧರಿಂದ ಸಂಗ್ರಹಿಸಿ, ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯಾಧಿಪತಿ ಪಿ. ಗುರುರಾಯರ ಸೂಚನಾನುಸಾರವಾಗಿ ಈ ಗ್ರಂಥವು ಕನ್ನಡದಲ್ಲಿ ರಚಿಸಲ್ಪಟ್ಟಿತು.

ಇದರಲ್ಲಿ ದೋಷವನ್ನು ಪಂಡಿತರು ಸೂಚಿಸಿದರೆ ಪುನರಾವೃತ್ತಿಗಾದರೂ ಸರಿಪಡಿಸುವೆವು.

ಈ ಗ್ರಂಥವು ಈ ಮೂರನೇ ಆವೃತ್ತಿಯಲ್ಲಿ ಸುಬ್ರಹ್ಮಣ್ಯಾದಿ ಮೊದಲಾದ ಸಪ್ತಕ್ಷೇತ್ರಗಳ ವಿಶೇಷ ಚರಿತ್ರೆಗಳಿಂದ ಬೆಳೆಸಲ್ಪಟ್ಟಿದೆ.

ಇತಿ ಸಜ್ಜನವಿಧೇಯ,

ಉಡುಪಿ.
ತಾ. 29—3—1932.

ಬಿ. ಶ್ರೀನಿವಾಸಭಟ್ಟ,
ಸಾಹಿತ್ಯಶಿರೋಮಣಿ.

# ವಿಷಯಾನುಕ್ರಮಣಿಕೆ.



|| ಶ್ರೀ: ||



॥ ಶ್ರೀಕೃಷ್ಣಾಯ ಮಧ್ವಪತಯೇ ನಮಃ ॥

# ಉಡುಪಿಕ್ಷೇತ್ರಮಹಿಮಾ.

ನಿರ್ಮಥ್ಯೋಗ್ರಭವಾರ್ಣವೇ ನಿಜಮನೋಽಭೀಷ್ಟಂ ದಿಶಾಮೀತಿ ಯಃ ಸಮ್ಯಗ್ ಜ್ಞಾಪಯಿತುಂ ಕರೇಣ ವಿಲಸನ್ಮನ್ಥಾನಮನ್ಯೇನ ಚ । ರಮ್ಯಂ ದಾಮ ದಧನ್ಮಹೇಶರಜತಗ್ರಾಮಶ್ರಿಯೋಽಲಂಕೃತಿಃ ಕರ್ಮಂದೀಶ್ವರಭಕ್ತಿಬಂಧನವಶಃ ಪ್ರೀತೋಽಸ್ತು ಕೃಷ್ಣಪ್ರಭುಃ ॥

## ಪರಶುರಾಮಕ್ಷೇತ್ರೋತ್ಪತ್ತಿ.

ಗೋಕರ್ಣಕ್ಷೇತ್ರಮಾರಭ್ಯ ಹ್ಯಾಕುಮಾರಗಿರೇರಪಿ ।
ರಾಮಕ್ರೀಡಾಕರಂ ಕ್ಷೇತ್ರಂ ಪುಣ್ಯಂ ಪುಣ್ಯತಮಂ ಕಲೌ ॥

ರೂ. ಮಾ. ಅ. ೧೧.

ಶ್ರೀಮನ್ನಾರಾಯಣನು ರೇಣುಕಾಜಮದಗ್ನಿಗಳೆಂಬ ಮಹರ್ಷಿದಂಪತಿಗಳ ಅನುಗ್ರಹಕ್ಕಾಗಿ ಶ್ರೀಪರಶುರಾಮರೂಪದಿಂದ ಅವತರಿಸಿ, ಸಜ್ಜನರಿಗೆ ಪೀಡಕರಾದ ಮದೋನ್ಮತ್ತ ದುಷ್ಟ ಕ್ಷತ್ರಿಯರ ವಂಶಗಳನ್ನು ಇಪ್ಪತ್ತೊಂದಾವರ್ತಿ ಸಂಹರಿಸಿ, ಆ ಕ್ಷತ್ರಿಯರ ಜಯದಿಂದ ತನ್ನ

ಸ್ವಾಧೀನವಾದ ಸಮಸ್ತ ಭೂಮಂಡಲವನ್ನು ಅಶ್ವಮೇಧ ಯಾಗ ಮುಗಿದ ಮೇಲೆ ಕಶ್ಯಪರೇ ಮೊದಲಾದ ಋತ್ವಿಜರಿಗೆ ದಾನಮಾಡಿ, ಬ್ರಾಹ್ಮಣರಿಗೆ ದಾನಮಾಡಿದ ಆ ಭೂಮಿಯಲ್ಲಿ ತಾನು ಆವಾಸಮಾಡುವುದು ಅಯೋಗ್ಯವೆಂದು ಭಾವಿಸಿ, ತನ್ನ ವಾಸಕ್ಕೆ ಯೋಗ್ಯವಾದ ಭೂಮಿಯನ್ನು ನಿರ್ಮಿಸಬೇಕೆಂಬಾಲೋಚನೆಯಿಂದ ಪಶ್ಚಿಮಘಟ್ಟವಾದ ಸಹ್ಯಪರ್ವತದ ಶಿಖರವನ್ನೇರಿ, ಸಮುದ್ರಕ್ಕೆ ಗುರಿಯಿಟ್ಟು ಬಾಣವನ್ನು ಪ್ರಯೋಗಿಸಿದನು. ಬಾಣಪ್ರಯೋಗದಿಂದ ಭೀತನಾದ ವರುಣನು ಶ್ರೀಪರಶುರಾಮದೇವರಿಗೆ ಶರಣಾಗತನಾದನು. ಆಗ ಭಾರ್ಗವನು— "ಎಲೋ ವರುಣನೇ! ನಿನ್ನ ಜಲದಲ್ಲಿ ನನ್ನ ಭಯದಿಂದ ಅಡಗಿ ಲೋಕ ನಾಶವನ್ನಿಚ್ಛಿಸಿ ತಪಸ್ಸು ಮಾಡುತ್ತಿದ್ದ ಅಸುರರು ನನ್ನ ಈ ಬಾಣಾಗ್ನಿಗೆ ತುತ್ತಾದರು. ಗೋಕರ್ಣಕ್ಷೇತ್ರದಿಂದ ಕನ್ಯಾಕುಮಾರಿವರೆಗೆ ಈ ಬಾಣ ಬಿದ್ದಷ್ಟು ದೂರ ಸಹ್ಯಪರ್ವತದಿಂದ ಮೂರುಯೋಜನ ದೂರ ಹಿಂದಕ್ಕೆ ನೀನು ಸರಿದು ಸ್ಥಳವನ್ನು ಬಿಟ್ಟುಕೊಡು. ಈ ಕ್ಷೇತ್ರವು ವರುಣಕ್ಷೇತ್ರವೆಂದೂ ಪ್ರಸಿದ್ಧವಾಗುವುದು. ನಾನು ಕೆಲವು ಕಾಲದ ಮೇಲೆ ಲಿಂಗಾಕಾರದಿಂದಲೂ, ಶ್ರೀಕೃಷ್ಣರೂಪದಿಂದಲೂ, ನಿನಗೆ ಪ್ರಸನ್ನನಾಗಿ ಇಲ್ಲಿಯೇ ಆವಾಸಮಾಡುವೆನು." ಎಂದು ವರುಣನನ್ನು ಸಮಾಧಾನಗೊಳಿಸಿದನು. ಆ ಮೇಲೆ ಸಮುದ್ರರಾಜನು ಬಿಟ್ಟುಕೊಟ್ಟ ಆ ಸ್ಥಳವನ್ನು ನಾನಾವಿಧಗಳಾದ ಕುಮಾರಧಾರಾ, ನೇತ್ರಾವತೀ, ಸುವರ್ಣಾನದೀ, ಪಾಪನಾಶಿನೀ, ಚಕ್ಷುಷ್ಮತೀ, ಪಯಸ್ವಿನೀ, ಶುಕ್ತಿಮತೀ, ಗಂಗಾವಳೀ, ಚಕ್ರನದೀ, ಸೀತಾನದೀ, ಇಂದ್ರಾಣೀನದೀ ಮೊದಲಾದ ಪುಣ್ಯನದಿಗಳಿಂದ ಅತಿ ಪವಿತ್ರವೂ, ವೇದಾಚಲ, ವಿಮಾನಗಿರಿ, ಸ್ವರ್ಣಕೂಟ, ಗಜಗಿರಿ ಮೊದಲಾದ ಪರ್ವತಶ್ರೇಣಿಗಳಿಂದ ಸುಂದರತಮವೂ, ಕರ್ಣಾಟಕ, ತೌಳವ, ಹವ್ಯಕ, ಕೇರಳ ಮೊದಲಾದ ಅನೇಕ ದೇಶಪ್ರಭೇದಗಳಿಂದ ಶೋಭಿತವೂ, ರೂಪ್ಯಪೀಠ ಸುಬ್ರಹ್ಮಣ್ಯಾದಿ ಸಪ್ತಕ್ಷೇತ್ರಗಳಿಂದ ಪವಿತ್ರತಮವೂ, ಮಧ್ವಸರೋವರ, ಚಂದ್ರಪುಷ್ಕರಿಣೀ, ಕಣ್ವತೀರ್ಥ, ಕಪಿಲತೀರ್ಥ, ರಾಮತೀರ್ಥ, ಚಕ್ರತೀರ್ಥ, ಪರಶ್ವಧಾದಿತೀರ್ಥಪಂಚಕ,

ಸಪ್ತರ್ಷಿತೀರ್ಥ, ಇಂದ್ರಾಣೀತೀರ್ಥ, ಆಮಲಕತೀರ್ಥ, ದಂಡತೀರ್ಥ, ಮೊದಲಾದ ಅನೇಕ ತೀರ್ಥಗಳಿಂದ ಯುಕ್ತವಾಗಿಯೂ, ಕ್ಷಾಮಾದ್ಯುಪದ್ರವರಹಿತವೂ, ಭುಕ್ತಿಮುಕ್ತಿಸಾಧಕವೂ, ಪುಣ್ಯಪ್ರದಾಯಕವೂ, ಸದ್ಧರ್ಮ ಸದಾಚಾರ ಸದಾರೋಗ್ಯಶೋಭಿತವೂ ಆಗಿರುವ ನೂತನ ಭೂಮಿಯನ್ನಾಗಿ ನಿರ್ಮಿಸಿದನು. ಅಂದಿನಿಂದ ಈ ಕ್ಷೇತ್ರವು **ಶ್ರೀಪರಶುರಾಮಕ್ಷೇತ್ರ**ವೆಂದೂ **ವರುಣಕ್ಷೇತ್ರ**ವೆಂದೂ ಪ್ರಸಿದ್ಧವಾಯಿತು. ಈ ನೂತನಭೂಮಿಗೆ ಉತ್ತರಭಾಗದಲ್ಲಿ ಗೋಕರ್ಣಕ್ಷೇತ್ರವೂ, ದಕ್ಷಿಣದಲ್ಲಿ ಕನ್ಯಾಕುಮಾರಿಯೂ, ಪೂರ್ವದಲ್ಲಿ ಸಹ್ಯಪರ್ವತವೂ, ಪಶ್ಚಿಮದಲ್ಲಿ ಸಮುದ್ರವೂ ಅವಧಿಗಳಾಗಿವೆ.

## ರೂಪ್ಯಪೀಠಪುರವೆಂದು ಪ್ರಸಿದ್ಧಿ ಕಾರಣ.

**ಪರಮಾತ್ಮನ್ನಿದಂ ಕ್ಷೇತ್ರಂ ರೂಪ್ಯಪೀಠೇತಿಸಂಜ್ಞಿತಮ್ ।**
**ಭವೇದ್ದೇವ ಪ್ರಸಾದೇನ ಯದಿ ತೇ ರೋಚತೇ ಮನಃ ॥**

ರೂ. ಮಾ. ಅ. ೧೩.

ಈ ಭೂಮಿಯ ರಕ್ಷಣಾರ್ಥವಾಗಿ ಶ್ರೀಭಾರ್ಗವನು ಕ್ಷತ್ರಿಯಧರ್ಮನಿರತನೂ ತನ್ನ ಭಕ್ತನೂ ಆದ ರಾಮಭೋಜನೆಂಬವನಿಗೆ ಪಟ್ಟಾಭಿಷೇಕ ಮಾಡಿದನು. ಆ ರಾಜನು ಶ್ರೀಪರಶುರಾಮನ ಆಜ್ಞೆಯನ್ನು ಮೀರದೆ ಸಜ್ಜನರನ್ನು ಪರಿಪಾಲಿಸುತ್ತಾ ದುಷ್ಟರನ್ನು ದಂಡಿಸುತ್ತಾ ಬಹುಕಾಲ ರಾಜ್ಯವನ್ನಾಳುತ್ತಿದ್ದು ಸಮಸ್ತ ಪಾಪಪರಿಹಾರಕವಾದ ಅಶ್ವಮೇಧಯಾಗವನ್ನಾಚರಿಸಿ ಶ್ರೀಭಾರ್ಗವನ ಅನುಗ್ರಹವನ್ನು ಪಡೆಯಬೇಕೆಂದು ನಿಶ್ಚಯಿಸಿ, ಭಂಗಾರದ ನೇಗಿಲಿನಿಂದ ಬ್ರಾಹ್ಮಣರ ಮೂಲಕವಾಗಿ ಭೂಮಿಯನ್ನು ಶೋಧಿಸಲು, ಆ ಭೂಮಿಯ ಮಧ್ಯದಲ್ಲಿದ್ದ ಒಂದು ಘಟಸರ್ಪವು ನೇಗಿಲಿನ ತುದಿಗೆ ತಾಗಿ ತನ್ನ ಪ್ರಾಣವನ್ನರ್ಪಿಸಿತು. ರಾಜನದನ್ನು ಕಂಡು ದುಃಖಿತನಾಗಿ ಶ್ರೀಭಾರ್ಗವನನ್ನು ಸ್ಮರಿಸಿ ಆತನಲ್ಲಿ ಈ ವಿಷಯವನ್ನು ವಿಜ್ಞಾಪಿಸಿಕೊಂಡನು. ಆಗಲಾ

ಜಗತ್ಪತಿಯು—"ಯಜ್ಞಕ್ಕೆ ವಿಘ್ನವನ್ನು ಬಯಸಿದ ಈ ಅಸುರನು ತನ್ನ ಜೀವನಕ್ಕೇ ವಿಘ್ನ ತಂದುಕೊಂಡನು. ಆ ಕಾರಣ ನಿನಗೆ ಸರ್ಪಹತ್ಯಾ ದೋಷವಿಲ್ಲ. ಧರ್ಮದ್ವೇಷಿಯನ್ನು ಸಂಹರಿಸಿದುದರಿಂದ ಪುಣ್ಯವನ್ನೇ ಸಂಪಾದಿಸಿರುವಿ. ಆದರೂ ಮನಸ್ಸಮಾಧಾನಕ್ಕೂ ಲೋಕಾಚಾರಾ ನುವರ್ತನಕ್ಕೂ ಈ ಪ್ರಾಯಶ್ಚಿತ್ತವನ್ನು ಮಾಡು. ಅಹಿಚ್ಛತ್ರದಿಂದ ಬ್ರಾಹ್ಮಣೋತ್ತಮರನ್ನು ಕರಿಸಿ ನಿನ್ನ ಶರೀರದ ಭಾರದಷ್ಟು ಭಂಗಾರ ವನ್ನು ತುಲೆ(ತಕ್ಕಡಿ)ಯಲ್ಲಿ ತೂಗಿಸಿ ದಾನಮಾಡು. ಒಂದು ಹರದಾರಿ ವಿಸ್ತೀರ್ಣವಾದ ಬೆಳ್ಳಿಯ ಪೀಠವನ್ನು ಸ್ಥಾಪಿಸಿ ಅದರ ನಾಲ್ಕು ಕಡೆಗ ಳಲ್ಲಿ ಸರ್ಪರನ್ನು ಪ್ರತಿಷ್ಠೆಮಾಡಿ ಮಧ್ಯದಲ್ಲಿ ಏಳುಹೆಡೆಯ ಚಿನ್ನದ ಸರ್ಪರಾಜನ ಪ್ರತಿಮೆಯಿಟ್ಟು ಪೂಜಿಸು" ಎಂದಾಜ್ಞಾಪಿಸಲು ಹಾಗೆಯೇ ಆ ರಾಜನು ಬ್ರಾಹ್ಮಣರನ್ನು ಕರಿಸಿ, ತುಲಾಭಾರ ಭಂಗಾರ ದಾನಮಾ ಡಿದನು. ಆ ಕಾಲದಿಂದ ಈ ದೇಶವು ತುಳುದೇಶವೆಂದೂ ಈ ದೇಶದ ಬ್ರಾಹ್ಮಣರು ತೌಲವರೆಂದೂ, ಅರಸನು ತುಲಾರಾಜನೆಂದೂ ಪ್ರಖ್ಯಾತ ರಾದರು. ಬೆಳ್ಳಿಯ ಪೀಠವನ್ನೂ ಅದರ ನಾಲ್ಕುಕಡೆಗಳಲ್ಲಿ ನಾಲ್ಕು ಸರ್ಪದೇವಾಲಯಗಳನ್ನೂ, ನಾಲ್ಕು ದುರ್ಗಾಲಯಗಳನ್ನೂ, ಮಧ್ಯ ದಲ್ಲಿ ಸುವರ್ಣ ಸರ್ಪರಾಜನನ್ನೂ ಸ್ಥಾಪಿಸಿದನು, ಆ ಸರ್ಪದೇವಾಲ ಯಗಳು ಮುಚ್ಚಿಲ್‌ಕೋಡು, ತಾಂಗೋಡು, ಮಾಂಗೋಡು, ಅರಿ ತ್ತೋಡು ಎಂದು; ಆ ದುರ್ಗಾಲಯಗಳು ಕಡಿಯಾಳಿ (ಕಡೇಹಳ್ಳಿ), ಬೈಲೂರು, ಕನಪಾಡಿ, ಪುತ್ತೂರು ಈ ನಾಲ್ಕು ಗ್ರಾಮಗಳಲ್ಲಿ ಪ್ರಸಿದ್ಧ ವಾಗಿವೆ. ರಾಜನು ಆ ವೇಳೆ ಬಹು ಸಂಭ್ರಮದಿಂದ ಅಶ್ವಮೇಧ ವನ್ನು ಮಾಡಿ, ಯಜ್ಞದೇವತೆಯಾದ ಭಾರ್ಗವನನ್ನೇ ಭಕ್ತಿಯಿಂದ ಪೂಜಿಸಿ ಸುವರ್ಣನದಿಯಲ್ಲಿ ಅವಭೃಥಸ್ನಾನಮಾಡಿ, ಬ್ರಾಹ್ಮಣರಿಗೆ ಬಹುವಿಧ ದಾನಮಾಡಿ, ತಾನು ಸ್ಥಾಪಿಸಿದ ದೇವಾಲಯಗಳಲ್ಲಿ ಪೂಜೆಯ ಸಲುವಾಗಿ ಎಂಟು ಗ್ರಾಮಗಳನ್ನು ಬ್ರಾಹ್ಮಣರಿಗೆ ದಾನಮಾಡಿ, ತಾನು ಮಾಡಿದ ಸಮಸ್ತ ಸತ್ಕರ್ಮವನ್ನು ಶ್ರೀಪರಶುರಾಮನ ಪಾದದಲ್ಲಿ ಅರ್ಪಿ ಸಿದನು. ಶ್ರೀಭಾರ್ಗವನು ಭಕ್ತಿಗೆ ಮೆಚ್ಚಿ, ಸಜ್ಜನರ ನಿತ್ಯ ಸಂಸರ್ಗ

ವನ್ನೂ, ತನ್ನ ಪಾದದಲ್ಲಿ ನಿಶ್ಚಲ ಭಕ್ತಿಯನ್ನೂ ಕೊಟ್ಟು ತನ್ನನ್ನೇ ಎಡೆ ಬಿಡದೆ ತಪೋವ್ರತಾದಿಗಳಿಂದ ಪೂಜಿಸುತ್ತಿರುವ ಆ ರಾಜನಿಗೆ ಸ್ವಲ್ಪ ಕಾಲದ ಮೇಲೆ ಲಿಂಗಾಕಾರದಿಂದ ಪ್ರತ್ಯಕ್ಷನಾಗಿ ಪ್ರಸನ್ನನಾದನು. ರಾಮಭೋಜನು ಶ್ರೀದೇವನ ಅನುಗ್ರಹವನ್ನು ನೋಡಿ, ಅತಿ ಹರ್ಷ ಭಕ್ತಿಗಳಿಂದ ನಮಸ್ಕರಿಸಿ, ಸ್ತೋತ್ರಮಾಡಿ, "ದೇವೋತ್ತಮನೇ! ಈ ಪಟ್ಟಣವು ರೂಪ್ಯಪೀಠಪುರವೆಂದು ಪ್ರಸಿದ್ಧವಾಗಲಿ" ಎಂದು ಪ್ರಾರ್ಥಿಸಿದನು. ಶ್ರೀಭಾರ್ಗವನು ಆತನ ಇಷ್ಟವನ್ನು ಸಲಿಸಿದನು. ಅಂದಿನಿಂದ ಈ ನಗರವು **ರೂಪ್ಯಪೀಠಪುರ**ವೆಂದೂ, ಸರ್ಪರಾಜನಾದ ಅನಂತ(ಶೇಷ)ನು ಗಣಗಳಿಂದೊಡಗೂಡಿ ಪೂಜಿತನಾಗಿ ಇಲ್ಲಿಯೇ ವಾಸಮಾಡಿದ ಕಾರಣ **ಅನಂತಾಸನ**ವೆಂದೂ ಪ್ರಖ್ಯಾತವಾಯಿತು.

- - -

# ಅನಂತೇಶ್ವರ.

**ಲಿಂಗಾಕಾರೇಣ ತನ್ಮಧ್ಯೇ ವ್ಯಕ್ತೋಽಭೂತ್ಕರುಣಾನ್ವಿತಃ । ಆಪಾತಾಲತಲಾತ್ತಸ್ಯ ಮೂಲಂ ಭೂಮೌ ಶಿರಃಕಿಲ ॥**

**ರೂ. ಮಾ. ಅ. ೧೫.**

ಶ್ರೀಭಾರ್ಗವನು ತಪೋನಿರತನಾದ ರಾಮಭೋಜನ ಪ್ರೀತ್ಯರ್ಥನಾಗಿ ಈ ರೂಪ್ಯಪೀಠದ ಮಧ್ಯದಲ್ಲಿ ಕೆಲವು ಕಾಲದ ಮೇಲೆ ಲಿಂಗಾಕಾರದಿಂದ ಪ್ರಾದುರ್ಭೂತನಾದನು. ಈ ಪ್ರಾದುರ್ಭಾವಕ್ಕೆ ಇನ್ನೊಂದು ಕಾರಣವೂ ಇದೆ. ಭಾರದ್ವಾಜ ಕುಲದಲ್ಲೊಬ್ಬ ಶ್ರೇಷ್ಠ ಬ್ರಾಹ್ಮಣನು ಪತ್ನೀಸಮೇತನಾಗಿ ವೇದಾರಣ್ಯದಲ್ಲಿ ಸಂತಾನಾಕಾಂಕ್ಷಿಯಾಗಿ ವೇದನಾರಾಯಣನನ್ನು ಸೇವಿಸುತ್ತಿದ್ದನು. ಶ್ರೀದೇವರು ಆತನಿಗೆ ಸ್ವಪ್ನದಲ್ಲಿ ತನ್ನ ದರ್ಶನ ಕೊಟ್ಟು "ಬ್ರಾಹ್ಮಣಶ್ರೇಷ್ಠನೇ! ನಿನ್ನ ಆತ್ಯಂತಿಕ ಸೇವೆಯಿಂದ ಸಂತುಷ್ಟನಾಗಿದ್ದೇನೆ. ನಿನ್ನ ಅಭೀಷ್ಟ ದೊರೆಯುವ ದಾರಿಯನ್ನು ತೋರಿಸುತ್ತೇನೆ. ಪಶ್ಚಿಮಸಮುದ್ರದ ಪೂರ್ವದಡದಲ್ಲಿ ರೂಪ್ಯಪೀಠವೆಂಬ ಕ್ಷೇತ್ರವಿದೆ. ಅಲ್ಲಿಗೆ ಶಿಷ್ಯರಿಂದೊಡಗೂಡಿ ಭಾರ್ಯಾ-

ಸಮೇತನಾಗಿ ಪ್ರಯಾಣ ಮಾಡಿ, ತೀರ್ಥಸ್ನಾನ ಪಿತೃದೇವತಾರಾಧನಾದಿಗಳನ್ನಾಚರಿಸಿ, ಹೇಮಶ್ರಾದ್ಧವನ್ನು ಮಾಡಿ, ಚಂದ್ರಮೌಳೀಶ್ವರನನ್ನು ಪೂಜಿಸಿ, ಅವನ ಅಪ್ಪಣೆ ಪಡೆದು, ಅವನ ಹಿಂಬದಿಯಲ್ಲಿರುವ ಸರ್ಪರಾಜಪೀಠವನ್ನು ಹಾಲಿನಿಂದ ಅಭಿಷೇಚಿಸು. ಆಗ ನಿನಗೆ ನಾನು ಲಿಂಗಾಕಾರದಿಂದ ಪ್ರತ್ಯಕ್ಷನಾಗಿ ಸರ್ವಾಭೀಷ್ಟವನ್ನು ಕೊಡುವೆನು. ನಾನು ಪರಶುರಾಮಾವತಾರದಲ್ಲಿ ರುದ್ರನಿಗೆ ಅನುಗ್ರಹ ಮಾಡಲಪೇಕ್ಷಿಸಿ ನನ್ನ ಅಂಶವನ್ನಾತನಲ್ಲಿಟ್ಟು ಅವನಿಗೆ ಶಿಷ್ಯನೆಂದು ತೋರ್ಪಡಿಸಿದೆನು. ಆಗ ಪಾರ್ವತೀಪತಿಯು ನಮಸ್ಕರಿಸಿ—'ಸರ್ವೋತ್ತಮನೇ! ಸರ್ವಜ್ಞನೂ, ಸರ್ವಶಕ್ತನೂ, ತ್ರಿಲೋಕಗುರುವೂ ಆದ ನೀನು ನನಗೆ ಶಿಷ್ಯನಾದುದು ಲೋಕವಿಡಂಬನಕ್ಕೂ, ನನ್ನ ಮೇಲೆ ಅನುಗ್ರಹಕ್ಕೂ ಅಲ್ಲದೆ ಬೇರೊಂದಕ್ಕೂ ಅಲ್ಲ. ನಿನ್ನ ತೇಜಸ್ಸಿನಿಂದ ಈ ನನ್ನ ರೂಪವು ಪವಿತ್ರೀಕೃತವಾಯಿತು. ಆ ಕಾರಣ ಈ ಲಿಂಗಾಕಾರವನ್ನು ಸ್ವೀಕರಿಸಿ ನೀನು ನನ್ನ ಪೂಜೆಯನ್ನು ಕೈಕೊಳ್ಳಬೇಕು' ಎಂದು ಬೇಡಿದನು. ಆಗ ನಾನು "ಎಲೋ ತ್ರ್ಯಂಬಕನೇ! ನಿನ್ನ ಇಷ್ಟದಂತೆ ರೂಪ್ಯಪೀಠದಲ್ಲಿ ನಾಗಾಸನದ ಮೇಲೆ ಲಿಂಗಾಕೃತಿಯಿಂದ ಪ್ರಸನ್ನನಾಗುವೆನು. ಆ ಮೇಲೆ ನಿನ್ನ ರೂಪವನ್ನು ಧರಿಸಿದ ನನ್ನನ್ನು ಪೂಜಿಸುತ್ತ ನನ್ನ ಎದುರಿನಲ್ಲಿ ವಾಸ ಮಾಡು" ಎಂದಾತನಿಗೆ ಆಜ್ಞಾಪಿಸಿದ್ದೇನೆ. ಅದರಂತೆ ಚಂದ್ರನ ಅಭೀಷ್ಟದಾನಕ್ಕಾಗಿ ಈ ಮೊದಲೇ ರುದ್ರನು ಪ್ರಾದುರ್ಭವಿಸಿದ್ದಾನೆ. ಆದುದರಿಂದ ಶಂಕರನಿಗೂ ನಿನಗೂ ಏಕಕಾಲದಲ್ಲಿ ಅಭೀಷ್ಟಪ್ರದನಾಗುತ್ತೇನೆ." ಈ ರೀತಿ ಸ್ವಪ್ನದಲ್ಲಿ ಶ್ರೀದೇವರ ಆಜ್ಞೆಯಾಗಲು ಆ ಬ್ರಾಹ್ಮಣನು ರೂಪ್ಯಪೀಠಕ್ಕೆ ಬಂದು ಕ್ಷೀರಾಭಿಷೇಕ ಮಾಡಿದೊಡನೆ ಶೇಷನ ವಿಚಿತ್ರವಾದ ದೇಹದ ಮೇಲೆ ಕೋಟಿಸೂರ್ಯ ತೇಜಃಪುಂಜವಾದ ಲಿಂಗಾಕಾರ ಮೂರ್ತಿಯು ಪ್ರತ್ಯಕ್ಷವಾಗಲು, ಬಹು ಭಕ್ತಿಯಿಂದ ನಮಿಸಿ ಪೂಜಿಸಿದನು. ಆಗಲಾನಂತಾಸನನು ಆ ವಿಪ್ರನಿಗೆ ಸತ್ಸಂತಾನ ಮೊದಲಾದ ಸರ್ವೇಷ್ಟವನ್ನು ಕೊಟ್ಟು, ಇದುರಿಗಿರುವ ರುದ್ರನಿಗೆ 'ಶಂಕರನೇ! ಪೂರ್ವದಲ್ಲಿ ವರವನ್ನಿತ್ತಂತೆ ಈ ಲಿಂಗಾಕಾರವನ್ನು ಧರಿಸಿ

ದೇನು ನೀನು ನನ್ನಿದುರಿನಲ್ಲಿ ನಿತ್ಯದಲ್ಲೂ ಇದ್ದು ಪೂಜಿಸುತ್ತಿರು. ನನ್ನ ಆಸನಭೂತನಾದ ಶೇಷನು ತನ್ನ ಅಂಶದಿಂದ ಪ್ರತಿಕ್ಷಣದಲ್ಲಿಯೂ ನನ್ನ ಆಜ್ಞೆಯಿಂದ ನಿನ್ನನ್ನು ಆವೇಶಿಸುವನು. ಆತನ ಅಂಶಾವೇಶ ಸಮಯ ದಲ್ಲಿ ಪಂಚವರ್ಣಶೋಭಿತಾಕಾರನಾಗುವಿ. ಈ ಶೇಷಾವೇಶದಿಂದ ಕಲ್ಪಾಂತರದಲ್ಲಿ ಶೇಷಪದವಿಯನ್ನು ಪಡೆಯುವಿ. ಸೇವಕರು ಮೊದಲು ನಿನ್ನನ್ನು ಸೇವಿಸಿ ನಿನ್ನ ಅನುಗ್ರಹಕ್ಕೆ ಪಾತ್ರರಾಗಿ ನನ್ನ ಸೇವೆ ಮಾಡ ತಕ್ಕದ್ದು. ಅನ್ಯಥಾ ನನಗೆ ತೃಪ್ತಿಯಾಗದು.' ಎಂದಾಜ್ಞಾಪಿಸಿದನು. ಈ ಲಿಂಗಾಕಾರದ ಶ್ರೀಹರಿಯು ಲಿಂಗಾಕಾರ ಶಿವನಿಗೆ ಅಂತರ್ಯಾಮಿ ಯಾಗಿಯೂ ಮುಂದಣಕಲ್ಪದಲ್ಲಿ ಶೇಷಪದವಿಗೆ ಯೋಗ್ಯನಾದ ಚಂದ್ರ ಮೌಳೀಶ್ವರನಿಗೆ ಸ್ವಾಮಿಯಾಗಿಯೂ, ಸುವರ್ಣಮಯ ಅನಂತ(ಶೇಷ) ಪ್ರತಿಮಾ ಮಧ್ಯದಲ್ಲಿ ವ್ಯಕ್ತನಾಗಿಯೂ ಇದ್ದುದರಿಂದ ಅನಂತಪದ್ಮ ನಾಭನೆಂತಲೂ, ಅನಂತೇಶ್ವರನೆಂತಲೂ, ಅನಂತಾಸನನೆಂತಲೂ, ರಾಮ ಭೋಜನ ಉಪಾಸನಾಮೂರ್ತಿಯಾದುದರಿಂದಲೂ, ಹಿಂದೆ ಹೇಳಿದಂತೆ ರುದ್ರನಿಗೆ ವರದಾತನಾದುದರಿಂದಲೂ, ಶ್ರೀಪರಶುರಾಮನೇ ಈ ಲಿಂಗ ದಲ್ಲಿ ಸ್ವಯಂವ್ಯಕ್ತನೆಂತಲೂ ಅಂದಿನಿಂದ ಶಿಷ್ಟರು ಭಜಿಸುತ್ತಿದ್ದಾರೆ. ಲಿಂಗಾಕಾರ ಮಾತ್ರದಿಂದ ಶಿವನೆಂದು ಯಾರೂ ತಿಳಿದವರು ಹೇಳುತ್ತಿ ರುವುದಿಲ್ಲ.

## ಚಂದ್ರೇಶ್ವರ-ಉಡುಪಿಯೆಂಬ ಹೆಸರಿನಕಾರಣ.

**ತಪಸಾ ಸ್ತುತಿಭಿಶ್ಚಾಸ್ಯ ಪ್ರಸನ್ನಶ್ಚಂದ್ರಶೇಖರಃ। ಚಂದ್ರಾ-ಯಾದಾತ್ ಕಲಾಪೂರ್ತಿಂ ಸ ಲಬ್ಧ್ವಾಥೋ ದಿವಂ ಯಯೌ॥ ತದಾಪ್ರಭೃತಿ ವಿಪ್ರೇಂದ್ರ ಚಂದ್ರಕ್ಷೇತ್ರಮಿದಂ ಜಗುಃ।**

ರೂ. ಮಾ. ಅ. ೧೬.

ದಕ್ಷಪ್ರಜಾಪತಿಯ ಶಾಪದಿಂದ ಕಲಾರಹಿತನೂ, ಅಪರಿಶುದ್ಧನೂ ಆದ ಚಂದ್ರನು ಈ ಕ್ಷೇತ್ರದಲ್ಲಿ ಈಗ ಕಡೆಕೊಪ್ಪಲವೆಂದು ಪ್ರಸಿದ್ಧವಾದ

ತೆಂಕಬೀದಿಯ ಕೊನೆಯಲ್ಲಿರುವ ಅರಣ್ಯದಲ್ಲಿ ತಪೋನಿರತನಾಗಿರಲು, ಶ್ರೀಮದನಂತೇಶ್ವರ ಪ್ರಾದುರ್ಭಾವದ ಮೊದಲೇ ಚಂದ್ರಮೌಳೀಶ್ವರ ನಾಮಕನಾದ ಶ್ರೀರುದ್ರದೇವನು ಚಂದ್ರನ ತಪಸ್ಸಿಗೆ ಮೆಚ್ಚಿ, ಒಂದು ಸರೋವರದಲ್ಲಿ ಲಿಂಗಾಕಾರದಿಂದ ಪ್ರತ್ಯಕ್ಷನಾಗಿ ಚಂದ್ರನಿಗೆ ಕಾಂತಿಯನ್ನೂ ಶುದ್ಧಿಯನ್ನೂ ಕೊಟ್ಟು, ಶ್ರೀಮದನಂತೇಶ್ವರನ ಪ್ರಾದುರ್ಭಾವವನ್ನಿದಿರು ನೋಡುತ್ತಾ ಈ ಕ್ಷೇತ್ರಾಲಂಕಾರಭೂತನಾದನು. ಅಂದಿನಿಂದ ಚಂದ್ರನ ತಪಸ್ಸ್ಥಾನವಾದ ಈ ಭಾರ್ಗವಕ್ಷೇತ್ರವು "ಉಡೂನ್ ಪಾತೀತಿ ಉಡುಪಃ, ಉಡುಪೋಽಸ್ಮಿನ್ನಸ್ತೀತಿ ಉಡುಪಿ" ಉಡುಪನೆಂದರೆ ನಕ್ಷತ್ರಸ್ವಾಮಿಯಾದ ಚಂದ್ರನು ಅವನ ಕ್ಷೇತ್ರವು 'ಉಡುಪಿ'ಯೆಂದು ಪ್ರಸಿದ್ಧವಾಯಿತು. ಇದಕ್ಕೆ ದೃಷ್ಟಾಂತವಾಗಿ ಆ ಚಂದ್ರೇಶ್ವರ ದೇವಾಲಯವು ಹಳ್ಳದಲ್ಲಿದ್ದು ಪೂರ್ವದ ಕೆರೆಯ ಆಕಾರವನ್ನು ಸೂಚಿಸುತ್ತದೆ.

## ಅಬ್ಜಾರಣ್ಯತೀರ್ಥ.

**ಚಂದ್ರಸ್ಯ ತಪಸಃ ಸ್ಥಾನಮಬ್ಜಾರಣ್ಯಮಿತೀರ್ಯತೇ ।**
**ಚಂದ್ರಸ್ಯಾಭೀಷ್ಟದಾನಾಯ ಯತ್ರ ಪ್ರಾದುರಭೂಚ್ಛಿವಃ ॥**
**ಚಂದ್ರಪುಷ್ಕರಿಣೀತ್ಯೇಷಾ ಸರಸೀ ಚಾತ್ರವಿಶ್ರುತಾ ।**

ರೂ. ಮಾ. ಅ. ೧೬.

ಆ ಚಂದ್ರನ ತಪಸ್ಸ್ಥಾನವಾದ ಆ ವನವು ಅಬ್ಜಾರಣ್ಯವೆಂದು ಖ್ಯಾತಿಯನ್ನು ಲಭಿಸಿತು. ಈಗ ಆ ಸ್ಥಳವು ಪಟ್ಟಣಪ್ರಾಯವಾಗುತ್ತ ಬರುತ್ತಿದ್ದರೂ ಸ್ವಲ್ಪ ಮಟ್ಟಿಗೆ ಅರಣ್ಯಚಿಹ್ನೆಗಳಿಂದ ಕೂಡಿದ್ದು ಪೂರ್ವದಲ್ಲಿ ಮಹಾರಣ್ಯವಾಗಿರುತ್ತಿತ್ತೆಂದು ಸೂಚಿಸುತ್ತದೆ. ಅಲ್ಲಿಯೇ ಆ ಚಂದ್ರನ ತಪಃಕುಂಡಿಕೆಯು ಚಂದ್ರಪುಷ್ಕರಿಣೀ ಯೆಂದು ಪ್ರಖ್ಯಾತವಾಗಿದೆ. ಇಲ್ಲಿ ತುಲಾ ಕಾರ್ತಿಕಾದಿ ಮಾಸಗಳಲ್ಲಿ ಸ್ನಾನ ಮಾಡಿ, ದಾನ ದಕ್ಷಿಣಾದಿಗಳನ್ನು ಕೊಡುವವರಿಗೆ ಗಂಗಾ ಕಾವೇರ್ಯಾದಿ

ಸ್ನಾನಫಲವೂ, ಯೋಗಸಿದ್ಧಿಯೂ, ಪಾಪಶಾಪ ನಿವೃತ್ತಿಯೂ, ಬ್ರಹ್ಮ ವರ್ಚಸ್ಸೂ ಪ್ರಾಪ್ತವಾಗುವುದು.

## ಸುವರ್ಣನದೀ-ರಾಮಭೋಜನ ಅವಭೃಥ.

**ಸಹ್ಯಾದ್ರೇಃ ಪಶ್ಚಿಮೇ ಭಾಗೇ ಸ್ವರ್ಣಕೂಟೋ ಮಹಾ-ಗಿರಿಃ । ತತ್ಪಾದಪ್ರಭವಾ ಯಾ ತು ಸ್ವರ್ಗಗಂಗೇತಿ ವಿಶ್ರುತಾ ॥**

**ರೂ. ಪಾ. ಅ. ೧೫.**

ಉಡುಪಿಯ ಈಶಾನ್ಯಭಾಗದಲ್ಲಿ ಸ್ವರ್ಣಕೂಟವೆಂಬ ಅತ್ಯುನ್ನತವಾದ ಬೆಟ್ಟವಿದೆ. ಈ ಪರ್ವತವು ಎರಡನೇ ಸಹ್ಯಪರ್ವತದಂತೆ ದಕ್ಷಿಣೋತ್ತರದಲ್ಲಿ ವ್ಯಾಪಿಸಿಕೊಂಡು, ಮಹಾಶೇಷನ ಮಹತ್ತಾದ ದೇಹದಂತೆ ಅತಿ ದೀರ್ಘವಾದ ವೇದಾಚಲ ಮಹಾಪರ್ವತದ ಅತ್ಯುನ್ನತ ಶಿಖರಸ್ಥಾನವಾಗಿ ಮಹಾಶೇಷನ ಮೇಲ್ಮುಖವಾದ ಫಣದಂತೆ ಗಗನ ಚುಂಬಿಯಾಗಿರುವುದು. ಶಶಮೃಗಾದಿ ಶಾಂತಪ್ರಾಣಿಗಳಿಗೂ ಹುಲಿ ಕರಡಿ ಮೊದಲಾದ ಕ್ರೂರ ಜಂತುಗಳಿಗೂ ವೈಷಮ್ಯವಿಲ್ಲದೆ ಆವಾಸ ಸ್ಥಾನವಾಗಿರುವುದರಿಂದ ನಿರ್ವೈರಬುದ್ಧಿಯನ್ನುಂಟುಮಾಡುವ ಮಹರ್ಷಿಗಳು ತನ್ನ ಗುಹೆಗಳನ್ನಲಂಕರಿಸುತ್ತಿದ್ದಾರೆಂಬುದನ್ನು ಸೂಚಿಸುತ್ತ ಸುವರ್ಣರಸಧಾರೆಯನ್ನು ಪ್ರವಾಹರೂಪವಾಗಿ ಹೊರಗೆಡವಂತೆ ಸ್ವರ್ಗ ಗಂಗಾಖ್ಯವಾದ ಸುವರ್ಣನದಿಗೆ ಉತ್ಪತ್ತಿಸ್ಥಾನವಾಗಿ ಗಂಗಾಜನಕವಾದ ಹಿಮವತ್ಪರ್ವತದ ಸಾಮ್ಯವನ್ನು ವಹಿಸುವಂತೆ ಅತಿ ಸುಂದರವಾಗಿದೆ. ಈ ನದಿಯಲ್ಲಿ ರಾಮಭೋಜನು ಯಜ್ಞಾಂತದಲ್ಲಿ ಅವಭೃಥ ಸ್ನಾನ ಮಾಡಿ, ವಿಪ್ರೋತ್ತಮರಿಗೆ ಈ ಪರ್ವತದಲ್ಲಿ ಬಹಳ ಸುವರ್ಣ ದಾನ ಮಾಡಿ ಚೆಲ್ಲಾಡಿದ್ದಾನೆ. ಆ ಕಾರಣ ಈಗಲೂ ದರಿದ್ರರು ಈ ಬೆಟ್ಟದಲ್ಲಿ ಹುಡುಕುತ್ತಿದ್ದರೆ ಒಂದು ದಿನದ ಜೀವನಕ್ಕೆ ಬೇಕಾದಷ್ಟು ಹಣವನ್ನು ಪಡೆಯುತ್ತಾರೆಂದು ಸ್ಥಳಿಕರ ಪ್ರವಾದವಿದೆ. ಸುವರ್ಣ ನದಿಯು ಸ್ವರ್ಣಕೂಟದ ಬುಡದಲ್ಲಿ ಹುಟ್ಟಿ ಸಹ್ಯಾದ್ರಿಯಿಂದುದಿಸಿದ

ಸೀತಾನದಿಯಿಂದ ಕೂಡಿ ಪಶ್ಚಿಮಸಮುದ್ರವನ್ನು ಸೇರುತ್ತದೆ. ಈ ಸ್ವರ್ಣಗಂಗೆಯು ತನ್ನಲ್ಲಿ ಸ್ನಾನಮಾಡುವಾಗ ಪಾಪವನ್ನು ಸುಡುತ್ತಿರುವುದು ಸ್ನಾನಮಾಡುವವರ ಕಿವಿಗೆ ಪ್ರತ್ಯಕ್ಷವಾಗಿ ಗೋಚರವಾಗುತ್ತದೆ. ರಾಮಭೋಜನು ಕೃಷ್ಣಪಕ್ಷದ ಚತುರ್ದಶೀ ಮಂಗಳವಾರ ಯುಕ್ತವಾದ ತಿಥಿಯಲ್ಲಿ ಅವಭೃಥಸ್ನಾನ ಮಾಡಿದುದರಿಂದ ಕೃಷ್ಣಪಕ್ಷ ಚತುರ್ದಶಿಯು ಮಂಗಳವಾರದಿಂದೊಡಗೂಡಿದಾಗ "ಕೃಷ್ಣಾಂಗಾರ ಚತುರ್ದಶೀ" ಯೆಂದು ಈ ನದೀ ಸ್ನಾನಕ್ಕೆ ಪುಣ್ಯತಿಥಿಯಾಗಿದೆ. ಅಂತಹ ಯೋಗವು ಬಂದಾಗೆಲ್ಲ ಶ್ರೀಪಾದಂಗಳವರೂ ಇತರ ಧಾರ್ಮಿಕ ಮಹಾಜನರೂ ಅಲ್ಲಿ ಸ್ನಾನಮಾಡಿ ದಾನದಕ್ಷಿಣಾದಿಗಳನ್ನು ಕೊಡುತ್ತಾರೆ. ಈ ಸ್ಥಳವು ಉಡುಪಿಯಿಂದ ಮೂರು ಮೈಲು ಉತ್ತರದಲ್ಲಿದೆ.

---

## ಇಂದ್ರಾಣೀತೀರ್ಥ.

**ರೂಪ್ಯಪೀಠಾತ್ಪೂರ್ವಭಾಗೇ ವೇದಾಚಲತಟೇ ಶುಭೇ ।**
**ಇಂದ್ರಾಣೀತೀರ್ಥಸಂಜ್ಞಂ ವೈ ಸರ್ವಕಾಮಪ್ರದಂ ನೃಣಾಂ ॥**

**ರೂ. ಮಾ. ಅ. ೧೨.**

ದೈತ್ಯಪೀಡಿತನಾದ ಇಂದ್ರನು ಗುರುಗಳ ಅನುಗ್ರಹದಿಂದ ಪುನಃ ತ್ರಿಲೋಕಾಧಿಪತ್ಯವನ್ನು ಪಡೆದು ನಾರದರ ಮುಖದಿಂದ ಶಚೀದೇವಿಯು ವೇದಾಚಲದಲ್ಲಿ ಋಷಿಗಳಿಂದ ರಕ್ಷಿತಳಾಗಿದ್ದಾಳೆಂದು ತಿಳಿದು, ಆ ಋಷಿಗಳನ್ನು ಸನ್ಮಾನಿಸಿ, ಶಚೀದೇವಿಯನ್ನು ಹೊಂದಿ, "ಈ ಕ್ಷೇತ್ರದಲ್ಲಿ ತಪಸ್ಸನ್ನು ಮಾಡುವವರಿಗೆ ಶೀಘ್ರದಿಂದ ಸಿದ್ಧಿಯಾಗಲಿ. ಈ ಕ್ಷೇತ್ರವಾಸಿಗೆ ಕಲಿಬಾಧೆ ಇಲ್ಲದಿರಲಿ. ಈ ತಪಃಕುಂಡಿಕೆಯು **ಇಂದ್ರಾಣೀತೀರ್ಥ**ವೆಂದು ಪ್ರಸಿದ್ಧವಾಗಲಿ. ಸಾಕ್ಷಾತ್ ಗಂಗೆಯೇ ಇಲ್ಲಿ ವಾಸಮಾಡುತ್ತಾಳೆ. ಇಲ್ಲಿ ಸ್ನಾನವು ಮುಕ್ತಿಯೋಗ್ಯರಿಗೆ ಮಾತ್ರ ಲಭಿಸೀತು." ಎಂದು ವರ ಕೊಟ್ಟು ಸ್ವರ್ಗಲೋಕಕ್ಕೆ ಶಚಿಯೊಡನೆ ಪ್ರಯಾಣ ಮಾಡಿದನು. ಈ ಪ್ರಕಾರವಾಗಿ ವೇದಾಚಲದಿಂದ ಉದ್ಭೂತವಾದ ಇಂದ್ರಾ

ಣೀತೀರ್ಥವು, ಅದರಿಂದ ಉದ್ಘಾತವಾದ ಒಂದು ಸರೋವರವೂ, ಅದರಿಂದ ಹುಟ್ಟಿದ ಇಂದ್ರಾಣೀನದಿಯೂ, ನಿಶ್ಚಯವಾಗಿ ಎರಡನೇ ಕಾವೇರೀಕ್ಷೇತ್ರದಂತಯೇ ತೋರುತ್ತದೆ. ಇಲ್ಲಿ ಎಲ್ಲೆಲ್ಲಿಯೂ ವಿಮೋಚನೆ ಹೊಂದದ ಪಿಶಾಚಗಳೂ ಈ ತೀರ್ಥಸ್ಪರ್ಶಮಾತ್ರದಿಂದ ಬಿಟ್ಟು ಹೋಗುತ್ತವೆ. ತುಲಾ ಕಾರ್ತಿಕ ಮಾಸಗಳಲ್ಲಿ ಇಲ್ಲಿ ಕಾವೇರೀ ಸನ್ನಿಧಾನವೂ ಇದೆ. ಇದಕ್ಕೆ ಜ್ಞಾಪಕವಾಗಿ ಒಂದು ಗುಹೆಯಿಂದ ಸ್ವಚ್ಛವಾದ ಜಲವು ಈ ಸರೋವರಕ್ಕೆ ಬರುತ್ತಲಿದೆ. ಆದುದರಿಂದ ಈ ತೀರ್ಥದಲ್ಲಿ ಆಗ ಸ್ನಾನದ ಗೊಂದಲವು ಬಹಳವಾಗಿರುತ್ತದೆ. ಈ ಬೆಟ್ಟದ ತುದಿಯಲ್ಲಿ ಪಂಚದುರ್ಗಾದೇವಿಯರು ಸ್ವಯಂವ್ಯಕ್ತರಾಗಿರುತ್ತಾರೆ. ಮತ್ತು ಆ ದುರ್ಗಾದೇವಿಯರ ಅಂತರ್ಯಾಮಿಗಳಾಗಿ ನಾರಾಯಣ ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧರೆಂಬ ಪಂಚ ಮೂರ್ತಿಗಳು ಭಜಕರ ಇಷ್ಟಾರ್ಥಗಳನ್ನು ಕೊಡುವರು. ಇಲ್ಲಿ ತೀರ್ಥಶ್ರಾದ್ಧ, ಪಿಶಾಚಗಳಿಗೆ ಗತಿಯಾಗುವ ಕರ್ಮಗಳು ಶೀಘ್ರ ಸಿದ್ಧಿದಾಯಕಗಳು. ಈ ಕ್ಷೇತ್ರವು ಶ್ರೀಕೃಷ್ಣಮಠದಿಂದ ಒಂದುವರೆ ಮೈಲು ದೂರ ಪೂರ್ವದಲ್ಲಿರುತ್ತದೆ.

---

## ಮಯೂರವರ್ಮ-ತೌಲವರ ಕುಲ.

**ಗತೇ ತು ಕತಿಚಿತ್ಕಾಲೇ ರವಿವಂಶಸಮುದ್ಭವಃ । ಮಯೂರವರ್ಮಾ ನೃಪತಿಸ್ತದ್ದೇಶಂ ಪ್ರಶಶಾಸ ಹ ॥ ಶೂದ್ರಪ್ರಾಯಾನ್ ದ್ವಿಜಾನ್ ಪ್ರೇಕ್ಷ್ಯ ಶಿಖಿವರ್ಮಾ ಸ್ವರಾಷ್ಟ್ರಜಾನ್। ಅಹಿಚ್ಛತ್ರಂ ಸಮಾಗತ್ಯ ತತ್ರತ್ಯಾನ್ ದ್ವಿಜಪುಂಗವಾನ್ ॥ ಆನೀಯ ಸ್ವಪುರಂ ತೇಭ್ಯೋ ದದೌ ಗ್ರಾಮಾನ್ ಮುದಾನ್ವಿತಃ।**

ಗ್ರಾಮಪದ್ಧತಿ. ಅ. ೧.

ರಾಮಭೋಜನ ಕಾಲದ ಮೇಲೆ ಆತನ ವಂಶವಾದ ಸೂರ್ಯವಂಶದಲ್ಲಿ ಮಯೂರವರ್ಮನೆಂಬ ಅರಸನು ಜನಿಸಿದನು. ಈತನ

ರಾಜಧಾನಿಯು (ಉದಯಪುರ) ಉದ್ಯಾವರವೆಂದು ಐತಿಹ್ಯವು. ಈ ಪುರವು ಉಡುಪಿಯಿಂದ ಮೂರು ಮೈಲು ದಕ್ಷಿಣದಲ್ಲಿದೆ. ಇದರ ದಕ್ಷಿಣಪಾರ್ಶ್ವದಲ್ಲಿ ಪಾಪವಿನಾಶಿನೀಯಿಂದ ಕೂಡಿದ ಚಕ್ಷುಷ್ಮತೀ ನದಿಯು ಇದೆ. ಶಂಭುಶೈಲ (ಚಂಬುಕಲ್ಲು) ಎಂಬ ದೊಡ್ಡ ಬಂಡೆ ಕಲ್ಲಿನ ಬೆಟ್ಟವೂ ಅದರ ಮೇಲೆ ರುದ್ರದೇವಾಲಯವೇ ಮೊದಲಾದ ದೇವಸ್ಥಾನಗಳೂ, ಅಲ್ಲಿ ಕೆಳಗೆ ಗಾಯತ್ರೀ ಸಾವಿತ್ರೀ ಸರಸ್ವತೀ ದೇವಾಲಯವೂ, ಅದರ ಸಮೀಪ ಮಹಾಗಣಪತಿದೇವಾಲಯವೂ, ಅದರ ಬಳಿ ರಸಭಾವಿಯೂ, ಇವುಗಳೆಲ್ಲವೂ ಪೂರ್ವದಲ್ಲಿ ಈ ಪ್ರದೇಶವು ರಾಜಧಾನಿಯಾಗಿರಬೇಕೆಂಬ ಊಹೆಯನ್ನುಂಟುಮಾಡುತ್ತವೆ. ರಾಮಭೋಜನು ಅಹಿಚ್ಛತ್ರದ ಶ್ರೋತ್ರಿಯರಾದ ಬ್ರಾಹ್ಮಣರನ್ನು ಕರಿಸಿ, ತನ್ನ ದೇಶದಲ್ಲಿರುವಂತೆ ಅಗ್ರಹಾರಗಳನ್ನು ಕೊಟ್ಟಿದ್ದರೂ, ಕಾಲಕ್ರಮೇಣ ಸ್ವದೇಶಾಭಿಮಾನದಿಂದ ಅವರು ಅಹಿಚ್ಛತ್ರಕ್ಕೆ ಪ್ರಯಾಣಮಾಡಿದ್ದರೆಂದು ಈ ಮಯೂರವರ್ಮನು ತಿಳಿದು, ಶ್ರೀಭಾರ್ಗವನ ಶಾಪದಿಂದ ಸ್ವದೇಶೀಯ ಬ್ರಾಹ್ಮಣರು ಭ್ರಷ್ಟರಾದ ಕಾರಣ ತಿರುಗಿ ಅಹಿಚ್ಛತ್ರಕ್ಕೆ ಹೋದ ಆ ಬ್ರಾಹ್ಮಣರನ್ನು ಕರಿಸಿ, ಸಾಮದಾನಗಳಿಂದ ಸಂತೋಷಪಡಿಸಿ, ಈ ಭಾರ್ಗವಕ್ಷೇತ್ರದಲ್ಲಿರುವಂತೆ ಮಾಡಿದನು. ೩೨(ಗ್ರಾಮ) ಅಗ್ರಹಾರಗಳನ್ನು ಜಾಹೀರು ಬಿಟ್ಟನು. ಈ ಅರಸನು ತನ್ನ ವಾರ್ಧಿಕ್ಯದಲ್ಲಿ ಹುಟ್ಟಿದ ಹೇಮಾಂಗದನೆಂಬ ಬಾಲಕನನ್ನೂ, ರಾಜ್ಯವನ್ನೂ ಮಂತ್ರಿಗಳಲ್ಲಿ ಇಟ್ಟು, ತಪಸ್ಸಿಗೆ ಹೋದನು. ಆ ನಂತರ ಆ ತೌಲವ ಶ್ರೋತ್ರಿಯರು "ಈ ರಾಜಧಾನಿಯಲ್ಲಿ ರಾಜನಿಲ್ಲ. ರಾಜಪುತ್ರನು ಇನ್ನೂ ಶಿಶುವು, ಮಂತ್ರಿಗಳು ಸ್ವಾರ್ಥಪರರು. ನಾವು ಸ್ವದೇಶಕ್ಕೆ ಹೋಗುವುದೇ ಉತ್ತಮವೆಂದು" ಪುನಃ ಪ್ರಯಾಣಮಾಡಿದರು. ಹೇಮಾಂಗದನು ಪಟ್ಟಕ್ಕೆ ಬಂದಕೂಡಲೇ ಮಂತ್ರಿಗಳಿಂದ ಪೂರ್ವವೃತ್ತಾಂತವನ್ನು ತಿಳಿದು, ಅಹಿಚ್ಛತ್ರಕ್ಕೆ ಹೋಗಿ, ಆ ಬ್ರಾಹ್ಮಣರನ್ನು ಸಮಾಧಾನಗೊಳಿಸಿ, ಕರತಂದು, ಅವರವರ ಅಗ್ರಹಾರಗಳನ್ನು ಅವರವರಿಗೆ ಕೊಟ್ಟು, ಆ ಗ್ರಾಮಗಳಲ್ಲಿ ಪ್ರತ್ಯೇಕ ಪ್ರತ್ಯೇಕ ಇಂತಿಷ್ಟು ಮನೆಯವರೆಂದು

ನಿರ್ಣಯಿಸಿದನು. ಆ ಕ್ರಮದಿಂದ ಆಯಾಯ ಮನೆಯವರು ಆಯಾಯ ಕುಲದವರೆಂದೂ, ಅದರಲ್ಲಿ ಕೆಲವು ಕುಲದವರು ಷಟ್ಕರ್ಮಿಗಳೆಂದೂ ಇತರರು ತ್ರಿಕರ್ಮಿಗಳೆಂದೂ ಸಂಸ್ಥೆಯುದಯಿಸಿತು. ಹೀಗೆ ಶಿವಬೆಳ್ಳಿ, ನೀಲಾವರ, ಬ್ರಹ್ಮಾವರ, ಸ್ಕಮಂತೂರು ಇತ್ಯಾದಿ ೩೨ ಗ್ರಾಮಗಳು. ಅವುಗಳಲ್ಲಿ (ನಡುಮನೆ) ನಡ್ಮಂತಿಲ್ಲಾಯ, ಕುಂಜಿತಾಯ, ಸಗ್ರಿತಾಯ, ತೋಟಂತಿಲ್ಲಾಯ, ಮೂಡಿಲ್ಲಾಯ (ಮೂಡುಮನೆ) ತೆಂಕಿಲ್ಲಾಯ (ತೆಂಕುಮನೆ) ಮರಡಿತಾಯ ಇತ್ಯಾದಿ ಉತ್ತಮ ಕುಲಗಳು ತಲೆದೋರಿದವು.

## ವಿಮಾನಗಿರಿ.

**ಅತೋ ವಿಮಾನಯೋಗಿತ್ವಾದ್ವಿಮಾನಗಿರಿಮುದ್ಭುತಂ। ಆರೋಹಂತೋ ಜನಾ ವಿಷ್ಣೋರಾರೋಹಂತಿ ಪದಂ ಧ್ರುವಮ್ ॥** ರೂ. ಮಾ. ಅ. ೧೨.

ಶ್ರೀಭಾರ್ಗವನು ಭಕ್ತಾಭೀಷ್ಟದಾನಸಮರ್ಥಳಾದ ದುರ್ಗಾನಾಮಕಳಾದ ಲಕ್ಷ್ಮಿಯನ್ನು ಎತ್ತರವಾದ ಬೆಟ್ಟದ ಮೇಲೆ ಪ್ರತಿಷ್ಠೆ ಮಾಡಿದಾಗ ದೇವತೆಗಳು ವಿಮಾನಗಳಿಂದ ಅಲ್ಲಿಗೆ ಬಂದು, ಆ ವೈಭವವನ್ನು ನೋಡಿ, ಆ ಲಕ್ಷ್ಮಿಯನ್ನೂ, ಪರಶುರಾಮನನ್ನೂ ನಮಸ್ಕರಿಸಿ, ಹಿಂದೆ ಹೋಗಲುದ್ಯುಕ್ತರಾಗಿ ವಿಮಾನಗಳನ್ನೇರಲು, ವಿಮಾನಗಳು ಸ್ಥಿರವಾಗಿದ್ದು ಕದಲಲಿಲ್ಲ. ದೇವತೆಗಳು ಶ್ರೀರಾಮನ ಮಹಿಮೆಯೆಂದಾಲೋಚಿಸಿ, ಅವನನ್ನೇ ಶರಣಾಗತರಾದರು. ಶ್ರೀದೇವನು "ಈ ವಿಮಾನ ಸಂಬಂಧದಿಂದ ಈ ಬೆಟ್ಟವು **ವಿಮಾನಗಿರಿ**ಯೆಂದು ಪ್ರಸಿದ್ಧವಾಗಲಿ" ಎಂದು ವರವನ್ನು ಕೊಟ್ಟು, ವಿಮಾನಗಳಿಗಾಜ್ಞಾಪಿಸಲು ತತ್ಕ್ಷಣವೇ ಆಕಾಶಕ್ಕೆ ಹಾರಿಹೋದವು. ಈ ಪರಶುರಾಮ ಪ್ರತಿಷ್ಠಿತಳಾದ ದುರ್ಗೆಯನ್ನು ದರ್ಶನಮಾಡಿ, ಸೇವಿಸಿದ ಸುಮಂಗಲೆಯರು ಎಂದೂ ವೈಧವ್ಯವನ್ನು ಹೊಂದುವದಿಲ್ಲ. ಇಲ್ಲಿ ನವರಾತ್ರಿಯಲ್ಲಿ ಬ್ರಾಹ್ಮಣಸಂತರ್ಪ

ಣೆಯು ವಿಜೃಂಭಣೆಯಿಂದ ನಡೆಯುವುದು. ಸಿಂಹಮಾಸದ ಶುಕ್ರವಾರಗಳಲ್ಲಿ ಬಹಳ ವಿಶೇಷವಿದೆ. ಇಲ್ಲಿನ ರಥೋತ್ಸವವು ಮಾಘ ಶುದ್ಧ ಹುಣ್ಣಿಮೆ ದಿನ ಬಹು ಸಂಭ್ರಮದಲ್ಲಿ ನಡೆಯುತ್ತದೆ. ಈ ದುರ್ಗಾಲಯವು ಕುಂಜಾರು ಎಂಬ ಹೆಸರಿನಿಂದ ಶ್ರೀ ಅದಮಾರು ಶ್ರೀಪಾದಂಗಳವರ ಅಧಿಕಾರದಲ್ಲಿದೆ. ಇದರ ಪಶ್ಚಿಮ ಭಂಡೆಕಲ್ಲಿನ ಮೇಲೆ ಪರಶುರಾಮಗುಡಿಯಿದೆ. ಇಲ್ಲಿ ಪ್ರಾರ್ಥಿಸಿದರೆ ಮಳೆಯು ಕೂಡಲೆ ಬರುತ್ತದೆ.

---

## ಪಾಜಕಕ್ಷೇತ್ರ.

**ರೂಪ್ಯಪೀಠಾದಗ್ನಿದಿಶಿ ನಾತಿದೂರೇಽತಿ ಪಾವನಮ್ ।**
**ಕ್ಷೇತ್ರಂ ಪರಶುರಾಮಸ್ಯ ನಾಮ್ನಾ ಪಾಜಕಮುದ್ಭುತಮ್ ॥**

ರೂ. ಪಾ. ಅ. ೧೨.

ಶ್ರೀಭಾರ್ಗವನು (ಸಪಾದಯೋಜನ) ಐದು ಹರದಾರಿ ಎತ್ತರವಾದ ವಿಮಾನಗಿರಿಯ ಶಿಖರವನ್ನೇರಿ ಸುತ್ತಲೂ ನೋಡಿ ಅಲ್ಲೆಲ್ಲಿಯೂ ನೀರಿಲ್ಲದಿರುವುದನ್ನು ಕಂಡು ತನ್ನ ಪಾದದಿಂದ ಆ ಪರ್ವತವನ್ನು ಪೀಡಿಸಿದನು. ಆ ಪೀಡನದಿಂದ ಪರ್ವತವು ಭೂಮಿಯೊಳಗೆ ಹೊಕ್ಕಿತು. ಆದುದರಿಂದ ವಿಮಾನಗಿರಿಯು ಈಗ ಸುಮಾರು ಒಂದುಮೈಲು ಎತ್ತರವಾಗಿ ತೋರುತ್ತದೆ. ಆ ಮೇಲೆ ಆ ಬೆಟ್ಟದ ಪೂರ್ವಭಾಗದಲ್ಲಿ ಭಾರ್ಗವನು ಕೊಡಲಿಯಿಂದ ಶಿಲೆಯನ್ನು ಹೊಡೆದು ಮಹಾಪಾತಕ ಪರಿಹಾರಕವೂ ಋಣತ್ರಯವಿಮೋಚಕವೂ ಆದ ಪರಶುತೀರ್ಥವನ್ನು ನಿರ್ಮಿಸಿದನು. ದಕ್ಷಿಣದಿಕ್ಕಿನಲ್ಲಿ ಬಿಲ್ಲಿನಿಂದ ಹೊಡೆದು ಶಸ್ತ್ರಪ್ರಹಾರದಿಂದ ಮರಣಹೊಂದಿದವರಿಗೆ ಸದ್ಗತಿಪ್ರದವಾದ ಧನುಸ್ತೀರ್ಥವನ್ನು ಕಲ್ಪಿಸಿದನು. ಪಶ್ಚಿಮದಿಕ್ಕಿನಲ್ಲಿ ಗದೆಯಿಂದ ಹೊಡೆದು ನೂರು ಜನ್ಮಗಳಿಂದ ಮಾಡಿದ ಪಾಪಗಳಿಗೆ ಪರಿಹಾರಕವಾದ ಗದಾತೀರ್ಥವನ್ನುಂಟುಮಾಡಿದನು. ಉತ್ತರದಿಕ್ಕಿನಲ್ಲಿ ಬಾಣವನ್ನು ಪ್ರಯೋಗಿಸಿ, ಪಾತಾಳದಲ್ಲಿ ಭೋಗವತೀಯೆಂಬ ಸರ್ಪರಾಜನ ನಗರಿಯೊಳಗಣ ಗಂಗೆಯನ್ನು

ಸ್ಥೋಲಕ್ಕೆ ತಂದು, ಜ್ಞಾನಾನಂದಪ್ರದವಾದ ಬಾಣತೀರ್ಥವನ್ನು ಸೃಷ್ಟಿ ಮಾಡಿದನು. ಈ ನಾಲ್ಕು ತೀರ್ಥಗಳಲ್ಲಿ ಒಂದೇ ದಿನ ಸ್ನಾನಮಾಡಿ, ವಿಮಾನಗಿರಿಯ ದುರ್ಗಾದರ್ಶನಮಾಡಿ, ಕೃಷ್ಣಾರ್ಪಣಬಿಟ್ಟವರಿಗೆ ಭೂಪ್ರದಕ್ಷಿಣೆ ಮಾಡಿ ಗಂಗಾದಿ ಸರ್ವತೀರ್ಥಸ್ನಾನಮಾಡಿದ ಪುಣ್ಯಾಫಲವು ದೊರಕುವುದೆಂದು ಶ್ರೀಭಾರ್ಗವನು ವರವನ್ನಿತ್ತನು. ಈ ತೀರ್ಥಸ್ನಾನವನ್ನು ಕಾರ್ತಿಕ ಮತ್ತು ಮಾಘಮಾಸಗಳಲ್ಲಿ ಹೆಚ್ಚಾಗಿ ಜನರು ಮಾಡುತ್ತಾರೆ. ಈ ತೀರ್ಥಸಂಬಂಧದಿಂದಲೇ ಆ ಕ್ಷೇತ್ರವು ಪಾಜಕವೆಂದು ಪ್ರಸಿದ್ಧವಾಯಿತು. ಪಾಜ ಅಂದರೆ ರಕ್ಷಕನೂ ಉತ್ಪತ್ತಿರಹಿತನೂ ಆದ ಪರಶುರಾಮನು. ಅವನಿಂದ ಕಂ ಅಂದರೆ ನೀರು ಈ ಕ್ಷೇತ್ರಕ್ಕೆ ಉಂಟಾಯಿತೆಂದು **ಪಾಜಕ**ವೆಂದು ಪ್ರಸಿದ್ಧವಾಯಿತು. ಈ ಕ್ಷೇತ್ರವು ಉಡುಪಿಯಿಂದ ಏಳು ಮೈಲು ದೂರ ದಕ್ಷಿಣದಲ್ಲಿದೆ. ಅದೇ ಶ್ರೀಮಧ್ವಾಚಾರ್ಯರ ಅವತಾರ ಸ್ಥಳವು. ಅಲ್ಲಿ ಆಚಾರ್ಯರ ಪಾದಚಿಹ್ನೆಗಳು ಅವರ ಅನೇಕ ಬಾಲಲೀಲೆಗಳನ್ನೂ ಮಹಿಮೆಯನ್ನೂ ಸೂಚಿಸುತ್ತಲಿವೆ. ಈ ಪಾದಚಿಹ್ನೆಯು ಶ್ರೀಮಧ್ವಾಚಾರ್ಯರು ಬಾಲ್ಯದಲ್ಲಿ ದುರ್ಗಾದರ್ಶನಕ್ಕೆ ಬೆಟ್ಟಕ್ಕೆ ಹೋದಾಗ ಮನೆಯಲ್ಲಿ ತಾಯಿ ಕರೆಯಲು, ಗಿರಿಯಿಂದ ತಾಯಿಯ ಬಳಿಗೆ ಹಾರಿಬಿಟ್ಟರು. ಆಗಾ ಮೃದುಪಾದಗಳ ಚಿಹ್ನೆಯು ಶಿಲೆಯಲ್ಲಿ ಅಂಕಿತವಾಯಿತು. ಈ ಪಾದಚಿಹ್ನೆಗಳ ಬಳಿಯಲ್ಲಿ ಶ್ರೀಮಧ್ವಾಚಾರ್ಯರ ವಿಗ್ರಹವನ್ನು ಆಚಾರ್ಯರ ಪರಮಭಕ್ತರಾದ ವಾಯುಪದಯೋಗ್ಯ ಋಜುಗುಣ ಮುಖ್ಯಾವತಾರರಾದ ಶ್ರೀವಾದಿರಾಜತೀರ್ಥ ಶ್ರೀಪಾದಂಗಳವರು ಪ್ರತಿಷ್ಠೆ ಮಾಡಿದರೆಂದು ಐತಿಹ್ಯವಿದೆ. ಈ ದೇವತಾ ಸ್ಥಳವು ಸುಂದರವಾದ ಶಿಲಾಮಯ ದೇವಾಲಯದಿಂದೊಡಗೂಡಿ ಪಡುಮಠವೆಂದು ಪ್ರಸಿದ್ಧವಾಗಿದ್ದು ಈಗ ಶ್ರೀ ಕಾಣೂರು ಶ್ರೀಪಾದಂಗಳವರ ಅಧಿಕಾರದಲ್ಲಿದೆ. ಇಲ್ಲಿ ಶ್ರೀಮಧ್ವಪಾದ ಸೇವಿಸಿ ಬ್ರಾಹ್ಮಣಭೋಜನ ಮಾಡಿಸಿದರೆ ಪಿತೃಗಳು ತೃಪ್ತರಾಗುವರು. ಈ ಮಠದ ಸಮೀಪ ಪೂರ್ವಮಠವೆಂಬ ಕಾಣೂರು ಶ್ರೀಗಳವರ ಮಠವೂ, ಅಲ್ಲಿ ಶ್ರೀಮಧ್ವಾಚಾರ್ಯರು ಬಾಲ್ಯದಲ್ಲಿ ಗಂಗಾಸ್ನಾನಾರ್ಥಿಯಾದ

ತನ್ನ ತಾಯಿಗೆ ಗಂಗೆಯನ್ನು ತರಿಸಿ, ಅವಳ ಸನ್ನಿಧಾನಯುಕ್ತವಾಗಿರುವಂತೆ ಮಾಡಿದ ವಾಸುದೇವತೀರ್ಥವೂ, ಇರುತ್ತವೆ. ಶ್ರೀಮಧ್ವಾಚಾರ್ಯರಿಗೆ ಪೂರ್ವಾಶ್ರಮದಲ್ಲಿ ವಾಸುದೇವನೆಂದು ಹೆಸರು. ವಾಸುದೇವತೀರ್ಥವೆಂಬ ಈ ಹೆಸರು ಬಾಲ್ಯದ ಅವರ ಮಹಾಮಹಿಮೆಯನ್ನು ಸೂಚಿಸುತ್ತದೆ. ವಾಸುದೇವಾಚಾರ್ಯರ ತಾಯಿತಂದೆಗಳು ಪ್ರತಿದಿನ ಪರಶು ಮೊದಲಾದ ನಾಲ್ಕು ತೀರ್ಥಗಳಲ್ಲಿ ಸ್ನಾನಮಾಡುತ್ತಿದ್ದರು. ಒಂದು ದಿನ ಸಾಧನ ದ್ವಾದಶಿಯಲ್ಲಿ ಆ ನಾಲ್ಕು ತೀರ್ಥಸ್ನಾನ ಅಸಾಧ್ಯವೆಂದು ಚಿಂತಿಸಿದಾಗ ವಾಸುದೇವನು ನಾಲ್ಕು ತೀರ್ಥಗಳ ಸನ್ನಿಧಾನವುಳ್ಳ ಈ ವಾಸುದೇವತೀರ್ಥವನ್ನು ನಿರ್ಮಿಸಿದನೆಂದೂ ಹೇಳುತ್ತಾರೆ. ಅಲ್ಲಿಯೇ ಆಚಾರ್ಯರ ಬಾಲಕ್ರೀಡಾಸೂಚಕಗಳಾದ ಹಾಲು ಮೊಸರು ಕಲ್ಲೂ, ಹೊಸ ಮಠವನ್ನು ಸ್ಥಾಪಿಸುವೆನೆಂದು ವಾಸುದೇವನು ಹೇಳಿದಾಗ ನಿನ್ನ ಕೈಯಲ್ಲಿದ್ದ ಒಣಕೋಲು ಚಿಗುರಿದರೆ ಹೊಸಮಠವನ್ನು ನಿರ್ಮಿಸುವಿಯೆಂಬ ತಂದೆಯ ಸಮಾಧಾನಕ್ಕೆ ಆ ಕೋಲನ್ನೂರಿ ಚಿಗುರಿಸಿದ ತಲೆಕೆಳಗಾಗಿ ಸ್ಥಾಪಿಸಿದ ವೃಕ್ಷವೂ ಇರುತ್ತದೆ. ವಿಮಾನಗಿರಿಯಿಂದ ಶ್ರೀಮಧ್ವಾಚಾರ್ಯರ ಅವತಾರ ಸ್ಥಳಕ್ಕೆ ಬರುವ ದಾರಿಯ ಶಿಲೆಯ ಮೇಲೆ ಬಾಲ್ಯದಲ್ಲಿ ಆಚಾರ್ಯರು ತನ್ನನ್ನು ಕಚ್ಚಲು ಬಂದ ಘಟಸರ್ಪರೂಪಿಯಾದ ಮಣಿಮಂತನ ಫಣವನ್ನು ಮೆಟ್ಟಿ ಕೊಂದ ಪಾದಚಿಹ್ನೆಯೂ, ಆ ಸರ್ಪಾಕಾರವೂ ಅಕೃತಕವಾದ ಸ್ಪಷ್ಟ ಆಕೃತಿಯಿಂದ ಕಾಣುತ್ತದೆ.

## ದಂಡತೀರ್ಥವು.

**ವಾಸುದೇವಸ್ಯ ವಾಯ್ವಂಶವಟೋರ್ದಂಡಭವಂ ಶುಭಂ।**
**ದಂಡತೀರ್ಥಾಭಿಧಂ ತೀರ್ಥಂ ಗುರುಕ್ಷೇತ್ರಗತಂ ಸದಾ ॥**

ಈ ಕ್ಷೇತ್ರವು ಪಾಜಕಕ್ಷೇತ್ರದಿಂದ ೨ ಮೈಲು ಪಶ್ಚಿಮದಿಕ್ಕಿನಲ್ಲಿ ಶ್ರೀಮಧ್ವಾಚಾರ್ಯರು ಪೂರ್ವಾಶ್ರಮದಲ್ಲಿ ವೇದಾಭ್ಯಾಸ ಮಾಡಿದ

ಸ್ಥಳವು. ಅಲ್ಲಿ ವೇದಾಭ್ಯಾಸಾನಂತರದಲ್ಲಿ ತೌಲವಶ್ರೇಷ್ಠ ಪೂಗವನ (ತೋಟಂತಿಲ್ಲಾಯ) ಕುಲಜರಾದ ಗುರುಗಳಿಗೆ ದಕ್ಷಿಣಾರೂಪವಾಗಿ ದಂಡದಿಂದ ಗುರುಗಳ ಹೊಲಗಳಿಗೆ ನೀರು ಹರಿಯುವುದಕ್ಕಾಗಿ ಒಂದು ತೀರ್ಥವನ್ನು ನಿರ್ಮಿಸಿ, ಅದರ ನೀರು ಕ್ಷೇತ್ರಕ್ಕೆ ಹರಿಯುವಂತೆ ಮಾಡಿದರು. ಈಗಲೂ ಪ್ರತ್ಯಕ್ಷವಾಗಿ ಆ ಪರಂಪರೆಯವರ ಕ್ಷೇತ್ರಕ್ಕೆ ನೀರು ಹರಿಯುತ್ತಲೇ ಇದೆ. ಈ ತೀರ್ಥವು ಅತಿ ಪವಿತ್ರವಾದುದು. ಈ ಸ್ಥಳದಲ್ಲಿ ಶ್ರೀ ಕೃಷ್ಣಾಪುರ ಶ್ರೀಪಾದಂಗಳವರು ತೀರ್ಥಸೇವಾಕಾಂಕ್ಷಿಗಳಿಗೆ ಅನ್ನದಾನವನ್ನು ಮಾಡುತ್ತಾರೆ.

---

## ಪಶ್ಚಿಮಮಹಾಸಮುದ್ರವು.

**ಪೌರ್ಣಮಾಸ್ಯಾಂ ಮಾಘಮಾಸೇ ಸ್ನಾತ್ವಾ ತು ಲವಣೋದಧೌ । ಬಲಭದ್ರಂ ತಥಾ ದೃಷ್ಟ್ವಾ ತತ್ರ ಕಾನನದೇವತಾಮ್ ॥ ರೌಪ್ಯಪೀಠೇ ಪುನಃ ಸ್ನಾತ್ವಾ ಕೃತ ಸಂಧ್ಯಾದಿಸತ್ಕ್ರಿಯಃ ।** ರೂ. ಮಾ. ಅ. ೧.

ಉಡುಪಿಯಿಂದ ಪಶ್ಚಿಮ ೪ ಮೈಲು ದೂರದಲ್ಲಿ ಶ್ರೀಬಲರಾಮ ಕ್ಷೇತ್ರವು ಒಡಭಾಂಡೇಶ್ವರ ನಾಮದಿಂದ ಪಶ್ಚಿಮಸಮುದ್ರತೀರದಲ್ಲಿರುತ್ತದೆ. ಈ ಪ್ರದೇಶವು ಮಧ್ವಾಚಾರ್ಯರು ಶ್ರೀಕೃಷ್ಣನನ್ನು ಪಡೆದ ಸ್ಥಳವು. ಇಲ್ಲಿ ಆಚಾರ್ಯರು ಶ್ರೀಕೃಷ್ಣಪ್ರತಿಮೆಯ ಸಂಗಡ ಬಲರಾಮಪ್ರತಿಮೆಯನ್ನೂ ತೆಗೆದುಕೊಂಡು ಆ ಗ್ರಾಮಸ್ಥರಿಗೆ ಕೊಟ್ಟು, ಪ್ರತಿಷ್ಠೆಮಾಡಿಸಿದರೆಂದು ಐತಿಹ್ಯವು. ಇಲ್ಲಿ ಸಮುದ್ರಸ್ನಾನವನ್ನು ಮಾಘ ಪೌರ್ಣಿಮೆಯಲ್ಲಿಯೂ, ಗ್ರಹಣಕಾಲದಲ್ಲಿಯೂ, ಪರ್ವತಿಥಿಗಳಲ್ಲಿಯೂ, ವಿಶೇಷವಾಗಿ ಎಳ್ಳಮಾವಾಸ್ಯೆಯಲ್ಲಿಯೂ ಮಾಡುತ್ತಾರೆ. ಸೂರ್ಯೋದಯದಲ್ಲಿ ರಾಮಪುಷ್ಕರಿಣೀತೀರ್ಥಸ್ನಾನಾನಂತರ ವಿಧಿಪ್ರಕಾರ ಸಮುದ್ರಸ್ನಾನ ಮಾಡಿ ತಿಲತರ್ಪಣ ಹಿರಣ್ಯಶ್ರಾದ್ಧಾದಿಗಳ

ನ್ನಾಚರಿಸಿ, ಬ್ರಾಹ್ಮಣರಿಗೆ ದಾನ ದಕ್ಷಿಣಾದಿಗಳನ್ನು ಕೊಟ್ಟು, ಬಲರಾಮಸೇವೆಯನ್ನು ಮಾಡಿ, ಮಧ್ಯಮಾರ್ಗದಲ್ಲಿರುವ (ಕೊಡವೂರು) ಕಾನನದೇವಾಲಯದಲ್ಲಿ ನಾರಾಯಣದರ್ಶನ ಮಾಡಿ ಮಧ್ವಸರೋವರದಲ್ಲಿ ಸ್ನಾನಾನಂತರ ಕೃಷ್ಣಾರ್ಪಣ ಬಿಟ್ಟರೆ ಶತಜನ್ಮಾರ್ಜಿತ ಪಾಪವೂ ನಷ್ಟವಾಗಿ ಸಮಸ್ತ ತೀರ್ಥಸ್ನಾನಫಲವೂ ಲಭಿಸುವುದು. ಈ ಸಮುದ್ರಸ್ನಾನವು ದ್ವಾರಾವತಿಯಲ್ಲಿ ಸಮುದ್ರಸ್ನಾನವನ್ನಾಚರಿಸಿದ ಫಲವನ್ನು ಕೊಡುವುದು. ಸಮುದ್ರದಿಂದ ಕೂಡಿದ ಈ ಉಡುಪಿಕ್ಷೇತ್ರವು ಶ್ರೀಕೃಷ್ಣಸನ್ನಿಧಾನದಿಂದ ಕೂಡಿದ ನೂತನ ದ್ವಾರಾವತಿಯೆಂದೆ ತಿಳಿಯತಕ್ಕದ್ದು.

---

## ಶ್ರೀಮದಾಚಾರ್ಯರು.

**ವಾಯುರ್ಹಿ ಬ್ರಹ್ಮತಾಮೇತಿ ಸ ಏವಾಖಿಲಸದ್ಗುರುಃ ।**
**ತಸ್ಮಾದ್ ಭದ್ರಾಯ ಲೋಕಾನಾಂ ಶಿವರೂಪ್ಯಗಿರಿಸನ್ನಿಧೌ ॥**
**ಪವಿತ್ರೇ ಪಾಜಕಕ್ಷೇತ್ರೇ ಅವತರಿಷ್ಯತಿ ।**

ಬೃ. ಪು. ಅ. ೧೯

ಈ ಉಡುಪಿಕ್ಷೇತ್ರದಲ್ಲಿ ಭರದ್ವಾಜ ಮಹಾಮುನಿಗಳು ಶ್ರೀವಾಯುದೇವರ ಅವತಾರಾರ್ಥವಾಗಿ ಭಾರ್ಗವಗೋತ್ರದಲ್ಲಿ ತೌಲವಕುಲಗಳಲ್ಲಿ ಪ್ರಸಿದ್ಧವಾದ ಮಧ್ಯಗೇಹ (ನಡುಮನೆ) ನಡ್ಡಂತಿಲ್ಲಾಯ ಎನ್ನುವ ಉತ್ತಮ ವಂಶದಲ್ಲಿ ಉದ್ಭವಿಸಿದರು. ಇವರಿಗೆ ಪತಿವ್ರತಾ ಶಿರೋಮಣಿಯಾದ ವೇದವತೀ ಎನ್ನುವ ಭಾರ್ಯೆಯು ಶೀಲಗುಣಗಳಿಂದ ಯೋಗ್ಯಳಾಗಿದ್ದು ೨ ಗಂಡುಮಕ್ಕಳನ್ನೂ ೧ ಹೆಣ್ಣು ಶಿಶುವನ್ನೂ ಪಡೆದಳು. ಇಬ್ಬರು ಗಂಡುಮಕ್ಕಳೂ ಮೃತರಾಗೋಣ, ಆ ದಂಪತಿಗಳು ಗುಣವಂತನೂ ದೀರ್ಘಾಯುಷ್ಮಂತನೂ ಆಗಿರುವ ಪುತ್ರನನ್ನು ಪಡೆಯಬೇಕೆಂದಾಲೋಚಿಸಿ, ಕರ್ದಮ ಪಾಂಡುರಾಜ ಮೊದಲಾದವರಿಂದ ಸೇವಿತನಾದ ಕುಲದೇವತೆಯಾದ ಅನಂತಾಸನನನ್ನು ೧೨ ವರ್ಷ

ಸೇವಿಸಿದರು. ಆ ಸಮಯದಲ್ಲಿ ಸನಕಾದಿಗಳ ಪರಂಪರೆಯವರಾದ ಅಚ್ಯುತಪ್ರೇಕ್ಷತೀರ್ಥರು ಯಥಾರ್ಥ ತತ್ವವನ್ನುಪದೇಶಿಸುವ ಶಿಷ್ಯನನ್ನು ಕೊಡಬೇಕೆಂದು ಶ್ರೀಮದನಂತೇಶ್ವರನನ್ನೇ ಧ್ಯಾನಿಸುತ್ತಿದ್ದರು. ಆ ಸಮಯ ದೇವತೆಗಳು "ಸಜ್ಜನರನ್ನುದ್ಧರಿಸೆಂದು" ಹರಿಯನ್ನು ಪ್ರಾರ್ಥಿಸಲು, ಕಲಿಯುಗದಲ್ಲಿ ಅವತರಿಸದ ತಾನು ಆ ಕಾರ್ಯದಲ್ಲಿ ಸಮರ್ಥರಾದ ತನ್ನ ಪುತ್ರರಾದ ಶ್ರೀಮುಖ್ಯಪ್ರಾಣದೇವರನ್ನು ಅವತಾರಕ್ಕೆ ಆಜ್ಞಾಪಿಸಿದನು. ಆ ವಾಯುದೇವರು ಈ ಅನಂತಾಸನನ ಸೇವಕರಾದ ನಡುಮನೆ ಭಟ್ಟರಲ್ಲಿ ಕಲಿಯುಗ ೪೩೩೯ ವಿಲಂಬಿ ಸಂವತ್ಸರದ ಆಶ್ವೀಜ ಶುದ್ಧ ದಶಮಿಯು ಬುಧವಾರದಲ್ಲಿ ಶ್ರೀಪಾಜಕಕ್ಷೇತ್ರದಲ್ಲಿ ಅವತರಿಸಿದರು. ಇವರ ಹೆಸರು ವಾಸುದೇವಾಚಾರ್ಯರು. ಬಾಲ್ಯದಲ್ಲಿಯೇ ಬುದ್ಧಿಶಕ್ತಿಯಿಂದ ಗುರುಗಳಿಗೆ ಆಶ್ಚರ್ಯವನ್ನು ಹುಟ್ಟಿಸಿದರು. ಉಪನಯನಾನಂತರ ವೇದಾಭ್ಯಾಸ ಮಾಡಿ, ಅಚ್ಯುತಪ್ರೇಕ್ಷತೀರ್ಥರಿಂದ ಸನ್ಯಾಸವನ್ನು ಹೊಂದಿ, ದ್ವೈತಭಾಷ್ಯಾದಿಗಳನ್ನು ಮಾಡಿ, ಬದರಿಕಾಶ್ರಮಕ್ಕೆ ಹೋಗಿ, ಅಲ್ಲಿ ವ್ಯಾಸಾಜ್ಞೆಯನ್ನು ಪಡೆದು, ದ್ವೈತಮತವನ್ನು ಪ್ರಸಿದ್ಧಿಗೊಳಿಸಿದರು.

---

## ಉಡುಪಿ ಶ್ರೀಕೃಷ್ಣಪ್ರತಿಷ್ಠೆ.

**ರೂಪ್ಯಪೀಠಾಂತಿಕೇ ನೌಸ್ತು ವಾರ್ಧೌ ಭಿನ್ನಾ ಭವಿಷ್ಯತಿ।**
**ಮೋತರಿಶ್ವಾಂಬುಧೌ ಮಗ್ನಾಂ ಪ್ರತಿಮಾಂ ಹಲಿನಾ ಸಹ ॥**
**ನಾಗಾಸನಸ್ಯ ನಿಕಟೇ ವಿಧಿನಾ ಸ್ಥಾಪಯಿಷ್ಯತಿ ।**

ರೂ. ಮಾ. ಅ. ೫.

ಕಲಿಯುಗದ ಆದಿಯಲ್ಲಿ ಭೃಗುಋಷಿಗಳೇ ಮೊದಲಾದವರು ಕಲಿಪೀಡೆಯಿಂದ ಭೂಮಿಯಲ್ಲಿ ನಿಲ್ಲಲಾರೆವೆಂದು ಮೊರೆಯಿಡಲು, ಭಾರ್ಗವಕ್ಷೇತ್ರದಲ್ಲಿ ಕಲಿಯು ಬಾಧಿಸುವುದಿಲ್ಲ; ತಾನು ಕೃಷ್ಣರೂಪ

ದಿಂದ ಸನ್ನಿಹಿತನಾಗುತ್ತೇನೆಂದು ವರ ಕೊಟ್ಟಿದ್ದಂತೆ ಶ್ರೀಕೃಷ್ಣಮೂರ್ತಿಯು ದ್ವಾರಕಿಯಿಂದ ಹಡಗಿನಲ್ಲಿ ಬರುತ್ತಾನೆಂದು ಜ್ಞಾನದೃಷ್ಟಿಯಿಂದ ತಿಳಿದು, ಆ ದಿನ ಉಷಃಕಾಲದಲ್ಲಿಯೇ ಶ್ರೀಮದಾಚಾರ್ಯರು ಸಮುದ್ರತೀರದಲ್ಲಿ ಕೃಷ್ಣಧ್ಯಾನಪರರಾಗಿದ್ದರು. ಆಗ ಒಬ್ಬ (ವೈಶ್ಯ) ವೈಂದನೆಂಬ ವರ್ತಕನು ನಮಸ್ಕರಿಸಿ, "ಸ್ವಾಮಿನ್! ಅಪಾಯಕ್ಕೆ ಕಾರಣವಿಲ್ಲದಿದ್ದರೂ ಆಕಸ್ಮಾತ್ತಾಗಿ ಹಡಗು ಮುಂದೆ ಗಮಿಸುವುದಿಲ್ಲ. ಸ್ವಲ್ಪಕಾಲದಲ್ಲಿಯೇ ಒಡೆದು ಮುಳುಗುವಂತಿದೆ. ದೈವಯೋಗದಿಂದ ಅನಾಥನಾದ ನನಗೆ ತಮ್ಮ ಪಾದದರ್ಶನವಾಯಿತು ಹಡಗು ನಡಿಯುವಂತೆ ಅನುಗ್ರಹಿಸಬೇಕೆಂದು" ಪ್ರಾರ್ಥಿಸಿದನು. ಆಚಾರ್ಯರು ತನ್ನ ಕಾವಿಶಾಟಿಯ ತುದಿಯಿಂದ ಘಾಳಿಹಾಕಲು, ಹಡಗು ಮೊದಲಿನಂತೆ ಹೊರಟಿತು. ಆ ಹಡಗಿನವನು "ಆಜ್ಞೆಯಾದುದನ್ನು ಅರ್ಪಿಸುವೆನೆಂದು ಬೇಡಿಕೊಳ್ಳಲು ಗೋಪೀಚಂದನ ಹೆಂಟೆಯನ್ನು ಮಾತ್ರ ಕೇಳಿದರಂತೆ. ಆ ಹೆಂಟೆಯ ಮಧ್ಯದಲ್ಲಿದ್ದ ದಿವ್ಯ ಶ್ರೀಕೃಷ್ಣಮೂರ್ತಿಯನ್ನು ಹಿಡಿದುಕೊಂಡು, ದ್ವಾದಶಸ್ತೋತ್ರದಿಂದ ಸ್ತೋತ್ರಮಾಡುತ್ತಾ, ಉಡುಪಿಗೆ ಹೊರಟು ಮಧ್ಯಮಾರ್ಗದಲ್ಲಿ ಸ್ವಲ್ಪ ಇಟ್ಟರಂತೆ. ಆ ಸ್ಥಳವು ಕೆರೆಮಠ ಆದಿ ಉಡುಪಿ ಎಂತ ಪ್ರಸಿದ್ಧವಾಗಿದೆ. ಅನಂತರ ಉಡುಪಿಗೆ ತಂದು, ಸರೋವರದಲ್ಲಿ ತೊಳೆದು ಶೋಧನೆಮಾಡಿ, ಬಲಿಷ್ಠರಾದ ಮುವ್ವತ್ತು ಜನರಿಂದ ಎತ್ತಲಸಾಧ್ಯವಾದ ಅತಿ ಸುಂದರವಾದ ಮಂಥಪಾಶ (ಕಡಗೋಲು ನೇಣು)ಗಳಿಂದ ಸಹಿತವಾದ ಆ ಕೃಷ್ಣವಿಗ್ರಹವನ್ನು ಅತಿ ಸಂಭ್ರಮದಿಂದ ಪ್ರತಿಷ್ಠೆಮಾಡಿದರು. ಶ್ರೀಕೃಷ್ಣನು ತಾನಾಗಿ ಈ ಸಾಲಿಗ್ರಾಮ ವಿಗ್ರಹದಲ್ಲಿ ಸನ್ನಿಧಾನಮಾಡಿದ ಕಾರಣ ಇದು ಸ್ವಯಂವ್ಯಕ್ತವೇ ಆಗಿರುತ್ತದೆ. ಶ್ರೀಕೃಷ್ಣನು ಸಂಸಾರಸಮುದ್ರವನ್ನು ದಾಟುವುದಕ್ಕೆ ಉಡುಪವೆಂದರೆ ದೋಣಿ ಆದರಂತಿರುವವನು. ಅಂಥಾ ಕೃಷ್ಣನು ಈ ಕ್ಷೇತ್ರದಲ್ಲಿರುವನಾದ ಕಾರಣ ಈ ಕ್ಷೇತ್ರವು "ಉಡುಪಮಸ್ಯಾಸ್ತೀತಿ" ಉಡುಪಿ ಎಂತ ಪ್ರಸಿದ್ಧವಾಯಿತು.

# ಶ್ರೀಕೃಷ್ಣವಿಗ್ರಹದ ಮೂಲಕಥೆ.

**ಕೃಷ್ಣಾಜ್ಞಯಾ ನಿರ್ಮಿತಂ ತತ್ಸ್ವರೂಪಂ ವಿಶ್ವಕರ್ಮಣಾ । ತದಭ್ಯರ್ಚೇ ಭಗವಾನ್ ವಿಷ್ಣುಃ ಸ್ವಯಂ ವ್ಯಕ್ತೋ ಬಭೂವ ಹ ॥** ರೂ. ಪಾ. ಅ. ೫.

ದ್ವಾರಾವತಿಯಲ್ಲಿ ದೇವಕೀದೇವಿಯು ಶ್ರೀಕೃಷ್ಣನನ್ನು ಕುರಿತು "ನಿನ್ನ ಬಾಲಲೀಲೆಯನ್ನು ಯಶೋದೆ ಮಾತ್ರ ನೋಡಲಿಕ್ಕೆ ಪಾತ್ರಳಾದಳು. ಒಂದಾವರ್ತಿಯಾದರೂ ನನಗೆ ತೋರಿಸೆಂದು" ಪ್ರಾರ್ಥಿಸಲು ಪ್ರಾತಃಕಾಲದಲ್ಲಿ ಮೊಸರು ಕಡಿಯುವಾಗ, ಏಕಾಂತದಲ್ಲಿ ಬಾಲರೂಪನಾದ ಕೃಷ್ಣನು ಕಡಗೋಲನ್ನು ಕಸುಕೊಂಡು,* ಮೊಸರುಪಾತ್ರವನ್ನು ಒಡೆದು, ಅನೇಕ ಬಾಲಕ್ರೀಡೆಗಳನ್ನು ತೋರಿಸಿದನು. ಅದನ್ನು ರುಗ್ಮಿಣಿಯು ನೋಡಿ, ಏಕಾಂತದಲ್ಲಿ "ದಿವ್ಯವಾದ ಬಾಲಮೂರ್ತಿಯನ್ನು ಮಾಡಿಸಿಕೊಡಬೇಕೆಂದು" ಪ್ರಾರ್ಥಿಸಲು, ಶ್ರೀರಮಣನು ಆ ಲಕ್ಷ್ಮೀರೂಪಳಾದ ರುಗ್ಮಿಣಿಯ ಲೋಕೋಪಕಾರಕವಾದ ಕೋರಿಕೆಯಂತೆ ವಿಶ್ವಕರ್ಮನನ್ನು ಕರಿಸಿ, ಸಾಲಿಗ್ರಾಮಶಿಲೆಯಿಂದ ಕಡಗೋಲು ನೇಣು ಧರಿಸಿರುವ, ಅವಯವಗಳಲ್ಲಿ ಚಕ್ರಚಿಹ್ನೆಗಳಿಂದ ಕೂಡಿದ, ಶಿಖಾಬಂಧಗಳಿಂದ ಅಲಂಕೃತವಾದ, ಬಾಲಕೃಷ್ಣನ ಪ್ರತಿಮೆಯನ್ನು ಮಾಡಿಸಿ, ರುಗ್ಮಿಣಿಗೆ ಕೊಟ್ಟನು. ಸ್ವಯಂಸನ್ನಿಹಿತನಾಗಿ ರುಗ್ಮಿಣಿಯೇ ಮೊದಲಾದ ಅಷ್ಟಮಹಿಷಿಯರಿಂದ ರಾಜೋಪಚಾರಗಳಿಂದ ಪೂಜಿತನಾದನು. ಕೃಷ್ಣಾವತಾರ ಸಮಾಪ್ತವಾದ ಮೇಲೆ ಆ ಪ್ರತಿಮೆಯನ್ನು ಅರ್ಜುನನು ಗೋಪೀಚಂದನದ ಬೆಟ್ಟದಲ್ಲಿಟ್ಟನು. ಅಲ್ಲಿಂದ ಹಡಗಿನವರು ಭಾರಕ್ಕಾಗಿ ಗೋಪೀಚಂದನದ ಹೆಂಟೆಯೆಂಬ ಬುದ್ಧಿಯಿಂದ ಸಮುದ್ರದಲ್ಲಿ ತಂದು ಆಚಾರ್ಯರಿಗೆ ಅರ್ಪಿಸಿದರು.

* ಹಾಗೆ ಕಡಗೋಲು ಕಸುಕೊಳ್ಳುವಾಗ ಅದರ ಕೆಳಭಾಗವು ದೇವಕಿಯ ಕೈಯಲ್ಲಿಯೇ ಉಳಿದುಹೋಯಿತು. ಈಗಲೂ ಶ್ರೀಕೃಷ್ಣನ ಕೈಯಲ್ಲಿರುವ ಮಂಥದ ಕೆಳಭಾಗವು ಕಾಣಿಸುವುದಿಲ್ಲ.

# ಅಷ್ಟಶ್ರೀಪಾದಂಗಳವರು.

**ಪೂಜಯಿಷ್ಯಂತಿ ವಿಧಿವತ್ತೇಷಾಂ ವಂಶಧರಾಸ್ತಥಾ । ತೇ ತು ಸಾಕ್ಷಾನ್ಮಹಾತ್ಮಾನೋ ವೈಕುಂಠೇ ವಿಷ್ಣುಮಂದಿರೇ ॥ ಜಯಾದೀನಾಂ ಪಾರ್ಷದಾನಾಮಂಶಭೂತಾ ಯತವ್ರತಾಃ ।**

**ರೂ. ಮಾ. ಅ. ೪.**

ಶ್ರೀಮದಾಚಾರ್ಯರು ತನ್ನಿಂದ ಸ್ಥಾಪಿತವಾದ ಮಠವೂ, ಶ್ರೀಕೃಷ್ಣಪೂಜೆಯೂ ಆಚಂದ್ರಾರ್ಕವಾಗಿ ಸಾಂಗವಾಗಿ ನಡಿಯುವಂತೆ ತನ್ನ ಏಕಾಂತಭಕ್ತರಾದ ವೈಕುಂಠದ್ವಾರಪಾಲಕರಾದ ಜಯ ವಿಜಯಾದಿಗಳ ಅಂಶರಾದ ಎಂಟು ಮಂದಿ ಶಿಷ್ಯರಿಗೆ ಆಶ್ರಮಕೊಟ್ಟು, ತಾನು ಉಡುಪಿಯಲ್ಲಿರುವಾಗ ಎಂಟು ಪೂಜೆಗಳನ್ನು ಅಷ್ಟಶ್ರೀಪಾದಂಗಳವರೂ, ಮಹಾಪೂಜೆಯನ್ನು ತಾನೂ ಮಾಡುತ್ತಿದ್ದು ಬದರೀಗಮನಾವಸರದಲ್ಲಿ ಇನ್ನು ಮುಂದೆ ಶ್ರೀಕೃಷ್ಣಪೂಜೆಯನ್ನೂ ಮಠಸ್ಥಾಪನೆಯನ್ನೂ ನಿರ್ವಿಘ್ನದಿಂದ ಕ್ರಮವಾಗಿ ನಡಿಸಬೇಕು, ಎಂದು ಆ ಅಷ್ಟಶ್ರೀಪಾದಂಗಳವರಿಗೆ ಆಜ್ಞಾಪಿಸಿದಂತೆ ಶ್ರೀಮದಾಚಾರ್ಯರ ಸಾಕ್ಷಾಚ್ಛಿಷ್ಯರಾದ ಶ್ರೀವಿಷ್ಣುತೀರ್ಥ ಶ್ರೀಹೃಷೀಕೇಶಾದಿ ತೀರ್ಥರು ಅನಂತರ ಈ ಅಷ್ಟಶ್ರೀಪಾದಂಗಳವರ ಪರಂಪರೆಯವರೂ ಶ್ರೀಮದಾಚಾರ್ಯರ ಸಂಕಲ್ಪಾನುಸಾರ ಶ್ರೀಕೃಷ್ಣಪೂಜಾದಿಗಳನ್ನು ನಡಿಸಿದರು. ಕಾಲಕ್ರಮದಿಂದ ಧರ್ಮವೃದ್ಧಿಗಾಗಿ ಅವತರಿಸಿದ ಶ್ರೀಮದ್ವಾದಿರಾಜ (ಗುರುರಾಜ)ತೀರ್ಥ ಶ್ರೀಪಾದಂಗಳವರು* ಪರ್ಯಾಯಪೂಜಾದಿ ನೂತನ ಕ್ರಮಗಳನ್ನೂ ಸ್ಥಾಪಿಸಿದರು. ಈ ವಾದಿರಾಜರು ಗುರುದ್ವಾರದಿಂದಲೆ ಭಕ್ತರಿಗೆ ಶ್ರೀಕೃಷ್ಣಾನುಗ್ರಹವು ಲಭಿಸತಕ್ಕದಾದುದರಿಂದ ಭಕ್ತರಿಗೆ ಸರ್ವಾಭೀಷ್ಟದಾತನಾದ ಶ್ರೀಮುಖ್ಯಪ್ರಾಣನನ್ನು ಪ್ರತಿಷ್ಠೆಮಾಡಿ, ನಿತ್ಯಪೂಜೆಗೆ ಅನುಕೂಲವಾಗುವಂತೆಯೂ, ಭಕ್ತರಿಂದ ಸಮರ್ಪಿತಗಳಾದ ಫಲಾದಿಗ

---

* ಶ್ರೀಮದ್ವಾದಿರಾಜಗುರುವರ್ಯರ ಚರಿತ್ರೆಯು ನಮ್ಮ ಗ್ರಂಥಾಲಯದಲ್ಲಿ ದೊರೆಯುವುದು. ಬೆಲೆ ೬ ಆಣೆ ಮಾತ್ರ.

ಳನ್ನೂ, ಕೂಡ ಕೃಷ್ಣನಿಗೆ ಶ್ರೀಮದಾಚಾರ್ಯರೇ ಅರ್ಪಿಸುವರೆಂಬ ಸಿದ್ಧಾಂತ ರಹಸ್ಯವನ್ನು ಬೋಧಿಸುವುದಕ್ಕಾಗಿಯೂ, ಕೃಷ್ಣಗುಡಿಯ ಉತ್ತರದ್ವಾರದಲ್ಲಿ ಶ್ರೀಮಧ್ವಾಚಾರ್ಯರ ಪ್ರತೀಕವನ್ನೂ ಪ್ರತಿಷ್ಠೆ ಮಾಡಿದರು. ಇದಕ್ಕೆ ಸೂಚನೆ ಭಕ್ತರಿಂದ ನಿವೇದಿಸಲರ್ಹಗಳಾದ ಯಾವ ಫಲಗಳನ್ನಾಗಲಿ ಆ ಶ್ರೀಮಧ್ವಾಚಾರ್ಯರ ಮುಂದುಗಡೆ ಇಡುವುದು ಹೊರತು ತಾವಾಗಿ ಅರ್ಪಿಸುವ ಸಂಪ್ರದಾಯವು ಈ ವರೆಗೂ ಇರುವುದಿಲ್ಲ. ಹಾಗೆಯೇ ಆ ಪರಮಹಂಸಶ್ರೇಷ್ಠರು ಶ್ರೀಮುಖ್ಯಪ್ರಾಣದೇವರ ಮುಂದುಗಡೆಯಲ್ಲಿ ಗರುಡಪ್ರತೀಕವನ್ನು ಸ್ಥಾಪಿಸಿದರು. ಈ ಮುಖ್ಯಪ್ರಾಣ ಗರುಡಪ್ರತೀಕಗಳು ಅಯೋಧ್ಯಾನಗರದ ದ್ವಾರದಲ್ಲಿದ್ದವೆಂದು ಪ್ರಸಿದ್ಧಿ. ಈ ಅಷ್ಟಬಾಲಾಶ್ರಮಿಗಳಲ್ಲದೆ ಅನೇಕ ಸದ್ಗೃಹಸ್ಥರೂ ಶ್ರೀಮಧ್ವಾಚಾರ್ಯರಿಂದ ಸನ್ಯಾಸವನ್ನು ಹೊಂದಿದ್ದರು. ಅವರಲ್ಲಿ ಮೊದಲನೆಯವರು ಶ್ರೀಮತ್ಪದ್ಮನಾಭತೀರ್ಥರು.



# ಉಡುಪಿ ಅಷ್ಟಶ್ರೀಪಾದಂಗಳವರ ಮಠನಾಮಾದಿಗಳು.

ವಂದೇ ಹೃಷೀಕೇಶಮಥೋ ನೃಸಿಂಹಂ ಜನಾರ್ದನಂ ಚಿಂತಯ ಧೀರುಪೇಂದ್ರಮ್ ।
ಶ್ರೀವಾಮನಂ ಸಂಸ್ಮರ ವಿಷ್ಣುಮೇಮಿ ಶ್ರೀರಾಮಮಂಚೇಽಹಮಥೋಕ್ಷಜಂ ಚ ॥

| ಮಠಗಳು. | ಮಧ್ವದತ್ತಪ್ರತಿಮಾ | ಸಾಕ್ಷಾಚ್ಛಿಷ್ಯರು. | ದ್ವಂದ್ವ |
|---|---|---|---|
| ಫಲಿಮಾರು ಮಠ | ಶ್ರೀರಾಮ | ಹೃಷೀಕೇಶತೀರ್ಥರು | ದ್ವಂದ್ವ |
| ಅದಮಾರು ಮಠ | ಕಾಲೀಯಮಥನಕೃಷ್ಣ | ನರಹರಿತೀರ್ಥರು | |
| ಕೃಷ್ಣಾಪುರ ಮಠ | ಕಾಲೀಯಮಥನಕೃಷ್ಣ | ಜನಾರ್ದನತೀರ್ಥರು | ದ್ವಂದ್ವ |
| ಪುತ್ತಿಗೇ ಮಠ | ಶ್ರೀವಿಠ್ಠಲ | ಉಪೇಂದ್ರತೀರ್ಥರು | |
| ಶೀರೂರು ಮಠ | ಶ್ರೀವಿಠ್ಠಲ | ವಾಮನತೀರ್ಥರು | ದ್ವಂದ್ವ |
| ಸೋದೇ ಮಠ | ಶ್ರೀಭೂವರಾಹ | ವಿಷ್ಣುತೀರ್ಥರು | |
| ಕಾಣೂರು ಮಠ | ಶ್ರೀನೃಸಿಂಹ | ರಾಮತೀರ್ಥರು | ದ್ವಂದ್ವ |
| ಪೇಜಾವರ ಮಠ | ಶ್ರೀವಿಠ್ಠಲ | ಅಧೋಕ್ಷಜತೀರ್ಥರು | |

# ಸುಬ್ರಹ್ಮಣ್ಯಕ್ಷೇತ್ರ.

**ಸುಬ್ರಹ್ಮಣ್ಯಸ್ಯ ಮಹಿಮಾ ವರ್ಣಿತುಂ ಕೇನ ಶಕ್ಯತೇ।**
**ಯತ್ರೋಚ್ಛಿಷ್ಟಮಪಿ ಸ್ಪಷ್ಟಂ ಶ್ವಿತ್ರಿಣಃ ಶೋಧಯತ್ಯಹೋ॥**

**ತೀರ್ಥಪ್ರಬಂಧ.**

ಶ್ರೀಸುಬ್ರಹ್ಮಣ್ಯಕ್ಷೇತ್ರವು ತೌಳವಮಂಡಲದಲ್ಲಿ ಅತಿ ಪ್ರಸಿದ್ಧವಾದುದು. ಇದರ ಮಹಿಮೆಯು ಸ್ಕಂದಪುರಾಣದಲ್ಲಿ—ಶ್ರೀಕೃಷ್ಣನಿಗೆ ಜಾಂಬವತೀದೇವಿಯಲ್ಲಿ ಸಾಂಬನೆಂಬ ಕುಮಾರನು ಹುಟ್ಟಿದನು. ಇವನು ಪ್ರಭಾಸಕ್ಷೇತ್ರದಲ್ಲಿ ಋಷಿಗಳಾಶ್ರಮದ ಬಳಿಯಲ್ಲಿ ತಿರುಗುವಾಗ ಈತನ ದಿವ್ಯಾದ್ಭುತ ಸೌಂದರ್ಯಕ್ಕೆ ಮೋಹಗೊಂಡು ಮುನಿಕನ್ಯೆಯರು ಆತನನ್ನೇ ಹಿಂಬಾಲಿಸಿ ನಡೆದರು. ಆಗ ಮುನಿಗಳು "ಎಲೈ ಸಾಂಬನೇ! ನಿನ್ನ ರೂಪವನ್ನು ಕಂಡು ಬಾಲೆಯರು ಕಾಮಪೀಡಿತರಾದುದರಿಂದ ನಿನಗೆ ಕುಷ್ಠರೋಗಬರಲಿ" ಎಂದು ಶಪಿಸಿದರು. ಆಗ ಸಾಂಬನು ಬೇಡಿಕೊಳ್ಳಲು, ಮುನಿಗಳು "ಧರ್ಮರಾಜನ ಅಶ್ವಮೇಧಕ್ಕಾಗಿ ಸಹದೇವನೊಡನೆ ನೀನು ದಕ್ಷಿಣದಿಗ್ವಿಜಯಕ್ಕೆ ಹೊರಟು ಪಾಂಡ್ಯಾದಿ ದೇಶಗಳನ್ನು ಗೆದ್ದು ತ್ರಿಗರ್ತಕ್ಕೆ ಬರುವಿ. ಅಲ್ಲಿ ಕುಮಾರಧಾರಾ ನದಿಯಲ್ಲಿ ಸ್ನಾನಮಾಡಿ, ವಾಸುಕಿಯ ದರ್ಶನಮಾಡಿ, ಆ ದೇವರ ಉಚ್ಛಿಷ್ಟ (ಎಂಜಲು)ವನ್ನು ಮೈಗೆ ಹಚ್ಚಿಕೊಂಡಲ್ಲಿ ಈ ರೋಗಪರಿಹಾರವಾಗುವುದು" ಎಂದನುಗ್ರಹಿಸಿದರು ಸಾಂಬನು ಸಹದೇವನೊಡನೆ ದೈವಯೋಗದಿಂದ ತ್ರಿಗರ್ತಕ್ಕೆ ಬಂದು ಮಧ್ಯಾಹ್ನದಲ್ಲಿ ತೃಷೆಯಿಂದ ಕುಮಾರಧಾರೆಯಲ್ಲಿ ಆ ಕುದುರೆಗೆ ನೀರುಕುಡಿಸಿ ಸಹದೇವನು ಸ್ನಾನಮಾಡುತ್ತಿರಲು, ಸಾಂಬನು ತನ್ನ ದೇಹವನ್ನು ತೊಳೆಯಲಿಕ್ಕಾರಂಭಿಸಿದಾಗ ಮೈಯಲ್ಲಿದ್ದ ಕುಷ್ಠವು ಕಡಿಮೆಯಾಗಲು, ಆಶ್ಚರ್ಯದಿಂದಲ್ಲಿ ಮುಂದು ವಾಸುಕಿಯನ್ನು ಪೂಜಿಸಿದಾಗ "ಸಾಂಬನೇ! ಬ್ರಾಹ್ಮಣೋಚ್ಛಿಷ್ಟವನ್ನು ಮೈಗೆ ಹಚ್ಚಿಕೊಳ್ಳು. ಕುಷ್ಠವೆಲ್ಲವು ನಷ್ಟವಾಗುವುದು" ಎಂಬ ಅಶರೀರವಾಣಿಯನ್ನು ನಂಬಿ ಆ ದೇವರ ಬ್ರಾಹ್ಮಣೋಚ್ಛಿಷ್ಟವನ್ನು ಮೈಗೆ

ಹಚ್ಚಿಕೊಂಡು ಆನಂದದಿಂದ ಕುಣಿದನು. ಕೂಡಲೆ ಆ ಕುಷ್ಠವು ಮಾಯವಾಗಿ ಸರ್ವಾಂಗಸುಂದರನಾಗಿ "ಈ ಕ್ಷೇತ್ರದ ಮಹಿಮೆಯು ಅತ್ಯಾಶ್ಚರ್ಯಕರವು. ಇಲ್ಲಿ ಬ್ರಾಹ್ಮಣೋಚ್ಛಿಷ್ಟವು ಅತಿ ಪವಿತ್ರವು ಸರ್ವರೋಗನಿವಾರಕವು. ಈ ಕ್ಷೇತ್ರವು ಕಾಶೀಸಮಾನವು. ಕುಮಾರ ಧಾರೆಯೇ ಗಂಗೆಯು. ಈ ನದೀಘೋಷವು ವೇದಘೋಷವು" ಎಂದು ಹೊಗಳಿ ತನ್ನ ದ್ವಾರಾವತಿಗೆ ಪ್ರಯಾಣಮಾಡಿದನೆಂದು ಹೇಳಿದೆ. ಮತ್ತು ಅಸಿತಮುನಿಗಳು ಕಶ್ಯಪರ ಆಶ್ರಮಕ್ಕೆ ಬಂದಲ್ಲಿ ಅದಿತಿಯು ಮಕ್ಕಳ ನ್ನಾಡಿಸುತ್ತಿದ್ದು ತಾನು ಬಂದುದನ್ನು ತಿಳಿಯಲಿಲ್ಲವೆಂದು ಕೋಪಿಸಿ "ರಾಕ್ಷಸಿಯಾಗು" ಎಂದು ಶಪಿಸಿ ಆಕೆಯ ಪ್ರಾರ್ಥನೆಯಿಂದ "ನೀನು ಪಿಶಿತಾಶಿಯೆನಿಸಿ ತಮನೆಂಬ ಅಸುರನ ಹೆಂಡತಿಯಾಗಿ ನಿನ್ನ ನೀರಿನ ಪಾತ್ರೆಯಲ್ಲಿ ವಿಷ್ಣುವು ಮತ್ಸ್ಯಾವತಾರಮಾಡಿದ ಮೇಲೆ, ನೀನು ಪತಿ ಯನ್ನು ಹುಡುಕುತ್ತಾ ಕುಮಾರಧಾರೆಯಲ್ಲಿ ಮಿಂದು ಸುಬ್ರಹ್ಮಣ್ಯನಿಂದ ಕೂಡಿದ ವಾಸುಕಿಯನ್ನು ಕಂಡಲ್ಲಿ ಶಾಪ ವಿಮೋಚನೆಯಾಗುವುದು" ಎಂದನುಗ್ರಹಿಸಿದಂತೆ ಶಾಪವಿಮೋಚನೆಯನ್ನು ಹೊಂದಿದಳು. ಮತ್ತು ಗರುಡನು ಸರ್ಪರನ್ನು ಕೊಲ್ಲುತ್ತ ಪಾತಾಳದಲ್ಲಿದ್ದ ವಾಸುಕಿಯೆಂಬ ಸರ್ಪರಾಜನನ್ನು ಹಿಡಿಸಿ ಆತನನ್ನೆತ್ತಿಕೊಂಡೊಯ್ಯಲು ಕಶ್ಯಪರು ಬಿಡಿಸಿ "ರುದ್ರದೇವರನ್ನು ತಪಸ್ಸಿನಿಂದ ಒಲಿಸು" ಎಂದಪ್ಪಣೆಯಿತ್ತಂತೆ ವಾಸು ಕಿಯು ಸಹ್ಯಾದ್ರಿಯ ಗುಹೆಯಲ್ಲಿ ತಪಸ್ಸು ಮಾಡಿದಾಗ ಶಿವನು ಪ್ರಸನ್ನ ನಾಗಿ "ನನ್ನ ಮಗ ಸುಬ್ರಹ್ಮಣ್ಯನು ತಾರಕಾದಿ ದೈತ್ಯರನ್ನು ಕೊಂದು ಇಲ್ಲಿಗೆ ಬಂದು ನಿನ್ನಲ್ಲಿ ತನ್ನ ಅಂಶವನ್ನಿಟ್ಟು ಅನುಗ್ರಹಿಸುವನು. ಅಂದಿ ನಿಂದ ಪೂಜ್ಯನಾಗಿ ಭಕ್ತರ ಇಷ್ಟಾರ್ಥಗಳನ್ನು ಕೊಡುತ್ತಾ ನಿರ್ಭಯ ನಾಗಿರು. ಇಲ್ಲಿ ಗರುಡನ ಭಯವು ನಿನಗಿಲ್ಲ." ಎಂದನುಗ್ರಹಿಸಿದಂತೆ ವಾಸುಕಿಯು ಸುಬ್ರಹ್ಮಣ್ಯಾಂಶದಿಂದ ಭಕ್ತರಿಷ್ಟಪ್ರದನಾಗಿದ್ದಾನೆ. ಹೀಗೆ ಮಹಾರಾಷ್ಟ್ರದ ರಾಜನಾದ ಸುಧರ್ಮನು ಅಡಿಗೆಯವನ ಕಪಟ ದಿಂದ ದೇವಲ ಋಷಿಗಳಿಗೆ ಮನುಷ್ಯಮಾಂಸವನ್ನು ಬಡಿಸಿದ್ದಕ್ಕಾಗಿ ಪಿಶಾಚತ್ವ ಶಾಪವನ್ನು ಪಡೆದವನು ಅಗಸ್ತ್ಯರ ಶಿಷ್ಯ ಕಕ್ಷೀವಾನ್ ಮುನಿ

ಗಳ ಅನುಗ್ರಹದಿಂದ ಕುಮಾರಧಾರೆಯಲ್ಲಿ ಸ್ನಾನಮಾಡಿ ಕುಶಾಚತ್ವವನ್ನು ಕಳಕೊಂಡು ವಾಸುಕಿಯನ್ನು ಪೂಜಿಸಿ ತಿರುಗಿ ರಾಜ್ಯವನ್ನಾಳಿ ಅಂತ್ಯದಲ್ಲಿ ಅಗ್ರಹಾರಾದಿಗಳನ್ನು ಕಟ್ಟಿ ಸುಬ್ರಹ್ಮಣ್ಯಕ್ಷೇತ್ರದಲ್ಲಿ ಬಹುಕಾಲ ಇದ್ದು ಮುಕ್ತಿಪಡೆದನೆಂದೂ ಈ ಕ್ಷೇತ್ರಮಹಿಮೆಯಲ್ಲಿ ವರ್ಣಿಸಲ್ಪಟ್ಟಿದೆ. ಇಂತಹ ಷಣ್ಮುಖನ ಕ್ಷೇತ್ರದಲ್ಲಿ ನಿತ್ಯಾನ್ನದಾನಾದಿಗಳು ಈಗಲೂ ನಡೆಯುತ್ತಿವೆ. ಸರ್ಪರ ಮೂಲಸ್ಥಾನವಾದ ಈ ಕ್ಷೇತ್ರಸೇವೆಯಿಂದ ಉಚ್ಛಿಷ್ಟಲೇಪನದಿಂದ ಸರ್ಪಪ್ರತಿಷ್ಠೆ ಮೊದಲಾದ ಸೇವೆಗಳಿಂದ ಈಗಲೂ ಪುತ್ರಸಂತಾನವೇ ಮೊದಲಾದ ಇಷ್ಟಾರ್ಥವನ್ನು ಭಕ್ತರು ಹೊಂದುವರು. ಇಲ್ಲಿ ಸುಬ್ರಹ್ಮಣ್ಯಷಷ್ಠೀಮಹೋತ್ಸವವು ಅತಿ ಪ್ರಸಿದ್ಧವಾದುದು. ಆಗ ಕುಮಾರಧಾರೆಯಿಂದ ದೇವಸ್ಥಾನ ಪರ್ಯಂತ ಅಂಗಪ್ರದಕ್ಷಿಣ ಸೇವೆಯು ಬಹು ವಿಶೇಷವಾಗಿದೆ. ದೇವಸ್ಥಾನದ ಉತ್ತರದಲ್ಲಿ ಕುಮಾರಧಾರಾ ನದಿಯು ಪೂರ್ವದಲ್ಲಿ ದರ್ಪಣತೀರ್ಥವೆಂಬ ನದಿಯು ಇದೆ. ದೇವಸ್ಥಾನದಿಂದ ಕುಮಾರಧಾರೆಗೆ ಹೋಗುವಾಗ ಮಧ್ಯದಲ್ಲಿ ವಾಸುಕಿ ಗುಹೆಯೆಂಬ ಮಹತ್ತಾದ ಗುಹೆಯಿದೆ. ಗರ್ತ=ಹೊಂಡ ೧-ಸುಬ್ರಹ್ಮಣ್ಯ. ೨-ಅನಂತೇಶ್ವರ (ಉಡುಪಿ). ೩-ಕೋಟ (ಶಂಕರನಾರಾಯಣ)ವೆಂಬ ಮೂರು ಗರ್ತಗಳು ಈ ದೇಶದಲ್ಲಿರುವುದರಿಂದ ತ್ರಿಗರ್ತದೇಶವೆಂದು ಪ್ರಸಿದ್ಧವಾಯಿತು.

## ಶ್ರೀಮದಾಚಾರ್ಯರ ವಿಶೇಷಮಹಿಮೆ.

# ಸುಬ್ರಹ್ಮಣ್ಯ ಮಠ.

**ಅಭೇದ್ಯಮತಿಯತ್ನೇನಾಪ್ಯಸ್ಫಲತ್ಕೃಷ್ಣವಿಗ್ರಹಮ್ ।**
**ತತ್ಪೂಜಾಭಾಜನಂ ಭಾತಿ ಮಾಧ್ವಂ ಹೃದಿವ ಸಂಪುಟಮ್ ॥**

**ತೀರ್ಥಪ್ರಬಂಧ**

ಶ್ರೀಮಧ್ವಾಚಾರ್ಯರು ವ್ಯಾಸರು ಕೊಟ್ಟ ೮ ವ್ಯಾಸಮುಷ್ಟಿ (ಸಾಲಿಗ್ರಾಮ)ಗಳನ್ನು ತಂದಿದ್ದರು. ಆ ಸಮಯ ಸುಬ್ರಹ್ಮಣ್ಯದಲ್ಲಿ

ಭಟ್ಟಾಚಾರ್ಯರ ಸಂಸ್ಥಾನವಿದ್ದು ನರಸಿಂಹತೀರ್ಥರೆಂಬವರು ಆ ಪೀಠದಲ್ಲಿದ್ದರು. ಅವರು ಶ್ರೀ ಮಧ್ವಾಚಾರ್ಯರೊಡನೆ ವಾದದಲ್ಲಿ ಸೋತು ಆ ಸಂಸ್ಥಾನವನ್ನಾಚಾರ್ಯರಿಗೆ ಒಪ್ಪಿಸಿದರು. ಅಲ್ಲಿದ್ದ ಪರಶುರಾಮಾರ್ಚಿತ ಲಕ್ಷ್ಮೀನೃಸಿಂಹದೇವರನ್ನು ನಿತ್ಯಪೂಜೆಗೆ ಇಟ್ಟುಕೊಂಡು, ಆದಿತ್ಯ ಅಂಬಿಕಾ ಗಣನಾಥ ಮಹೇಶ್ವರ ಪ್ರತಿಮೆಗಳನ್ನು ಅಲ್ಲಿ ಉಮಾಮಹೇಶ್ವರಯೆಂಬ ಗುಡಿಯಲ್ಲಿರಿಸಿದ್ದು ಈಗಲೂ ಪ್ರತ್ಯಕ್ಷವಾಗಿದೆ. ಹಾಗೆ ಆಚಾರ್ಯರು ಸ್ವಕರಾರ್ಚಿತ ಪಾಂಡುರಂಗವಿಗ್ರಹವನ್ನು ವ್ಯಾಸದೇವರ ಐದು *ಸಾಲಿಗ್ರಾಮವುಳ್ಳ ಒಂದು ದೃಢವಾದ ಸಂಪುಟವನ್ನೂ ಮತ್ತೊಂದು ವ್ಯಾಸ ಸಾಲಿಗ್ರಾಮವನ್ನೂ ಅಂತು ವ್ಯಾಸ-ವಿಠ್ಠಲ-ಸಂಪುಟ-ನರಸಿಂಹ ಎಂದು ನಾಲ್ಕು ದೇವರನ್ನು ಆ ಸಂಸ್ಥಾನದಲ್ಲಿಟ್ಟು ತಾವು ಬೆಳಿಗ್ಗೆ ಸುಬ್ರಹ್ಮಣ್ಯ ವ್ಯಾಸಪೂಜಾ, ಮಧ್ಯಾಹ್ನ ನಡ್ಡಂತಾಡಿ ವ್ಯಾಸಪೂಜಾ, ಸಾಯಂಕಾಲ ಉಡುಪಿ ಕೃಷ್ಣಪೂಜಾ, ಬೆಳಿಗ್ಗೆ ಉಡುಪಿ, ಮಧ್ಯಾಹ್ನ ನಡ್ಡಂತಾಡಿ, ಸಾಯಂಕಾಲ ಸುಬ್ರಹ್ಮಣ್ಯ ಹೀಗೆ ಪೂಜಿಸುತ್ತಿದ್ದು, ತಮ್ಮ ಸಾಕ್ಷಾತ್ ಸಹೋದರರೂ ಶಿಷ್ಯರೂ ಆಗಿದ್ದ ವಿಷ್ಣುತೀರ್ಥಾಚಾರ್ಯರಿಗೆ ಸುಬ್ರಹ್ಮಣ್ಯ ಮಠವನ್ನು ಕೊಟ್ಟರು. ಆ ವಿಷ್ಣುತೀರ್ಥರು ಮಹಾ ತಪಸ್ವಿಗಳು. ಅವರಿಗೆ ಶ್ರೀ ವ್ಯಾಸತೀರ್ಥರು ಅನಿರುದ್ಧತೀರ್ಥರು ಎಂಬಿಬ್ಬರು ಶಿಷ್ಯರು. ಶ್ರೀ ವ್ಯಾಸತೀರ್ಥರ ಪರಂಪರೆಯೇ ಉಡುಪಿ ಶ್ರೀ ಸೋದಾ ವಾದಿರಾಜಮಠದವರು, ಶ್ರೀಕೃಷ್ಣ ವರಾಹ ಹಯಗ್ರೀವ ವ್ಯಾಸದೇವರ ಪೂಜಕರು. ಎರಡನೆ ಅನಿರುದ್ಧತೀರ್ಥರ ಪರಂಪರೆಯವರೇ ಶ್ರೀಸುಬ್ರಹ್ಮಣ್ಯ ಮಠದವರು. ಈ ಪರಂಪರೆಯವರು ಈಗಲೂ ಶ್ರೀ ವ್ಯಾಸದೇವರ ಪೂಜಕರಾಗಿ ಆ ಕ್ಷೇತ್ರವನ್ನು ಅಲಂಕರಿಸಿಕೊಂಡಿರುತ್ತಾರೆ. ವಿಷ್ಣುತೀರ್ಥರು ಕುಮಾರಪರ್ವತದ

---

*ಈ ವಿಷಯವು "ಸುಬ್ರಹ್ಮಣ್ಯ ಸಂಸ್ಥಾನದ ಸಂಕ್ಷಿಪ್ತ ಇತಿಹಾಸ"ವೆಂಬ ಮುದ್ರಿತ ಪುಸ್ತಕದ ಆಧಾರದಿಂದ ಬರೆದುದು. ಬೇರೆ ಕೆಲವರು ಸುಬ್ರಹ್ಮಣ್ಯ ಮಠದಲ್ಲಿ ಒಂದೇ ವ್ಯಾಸಮುಷ್ಟಿಯೆಂದೂ ಅಭೇದ್ಯವಾದ ಸಂಪುಟವು ನರಸಿಂಹ ಸಂಪುಟವೆಂದು ಪ್ರಸಿದ್ಧಿಯಿದೆ. ಉಳಿದ ಐದು ವ್ಯಾಸಮುಷ್ಟಿಗಳು ಕಟ್ಟಿಲದಲ್ಲಿವೆಯೆಂದು ಹೇಳುತ್ತಾರೆ.

ಶಿಖರದಲ್ಲಿ ಈಗಲೂ ತಪಸ್ಸುಮಾಡುತ್ತಿದ್ದಾರೆ. ಮುಂದೆ ಮಧ್ವಮತಪ್ರ ಹ್ರಾಸವಾದಲ್ಲಿ ಇವರು ಅಲ್ಲಿಂದ ಇಳಿದು ಬಂದು ಕಡ್ತಿಲದಲ್ಲಿಟ್ಟಿದ್ದ ಮಧ್ವಶಾಸ್ತ್ರವನ್ನೆತ್ತಿ ತಿರುಗಿ ಪ್ರಚಾರಗೊಳಿಸುವರಂತೆ. ಇವರು ತಪಸ್ಸಿಗೆ ಹೋದಾಗ ವ್ಯಾಸಸಂಪುಟವನ್ನೊಯ್ದಿದ್ದರು. ಅನಿರುದ್ಧತೀರ್ಥರು ಆ ಸಂಪುಟವನ್ನಪೇಕ್ಷಿಸಿದ್ದನ್ನು ಜ್ಞಾನದೃಷ್ಟಿಯಿಂದ ತಿಳಿದು ವಿಷ್ಣುತೀರ್ಥರು ಸ್ವಪ್ನದಲ್ಲಿ "ನಾಳೆ ಕುಮಾರಧಾರೆಯಲ್ಲಿ ಅದು ಬರುವುದು. ಅದನ್ನು ಪೂಜಿಸೆಂದು" ಹೇಳಲು ಅದರಂತೆ ಆ ಸಂಪುಟವು ಬರಲು ಅದನ್ನೂ ಅದರೊಡನೆ ಬಂದ ದರ್ಪಣ ಅಕ್ಷಯಪಾತ್ರೆಗಳನ್ನೂ ತೆಕ್ಕೊಂಡು ಮಠದಲ್ಲಿಟ್ಟರು. ಅದರಿಂದ ಆ ನದಿಗೆ ದರ್ಪಣತೀರ್ಥವೆಂದೂ ಸಂಪುಟ ಸಿಕ್ಕಿದ ಸ್ಥಳಕ್ಕೆ ಸಂಪುಟತೀರ್ಥವೆಂದೂ ಹೆಸರು. ಈ ವಾರ್ತೆ ಕೇಳಿ ಅಲ್ಲಿನ ಬಲ್ಲಾಳರಾಜನು ಬಲಾತ್ಕರಿಸಿ ಆ ಸಂಪುಟವನ್ನು ಆನೆಯ ಕಾಲಿನಿಂದ ತುಳಿಸಿದರೂ ಚಮ್ಮಟಿಯಿಂದ ಬಡಿಸಿದರೂ ಒಡೆಯಲಿಕ್ಕಾಗಲಿಲ್ಲ. ಆನೆಯು ದರ್ಪಣತೀರ್ಥದಲ್ಲಿ ಬಿದ್ದು ಸತ್ತಿತು. ಆ ಸ್ಥಳಕ್ಕೆ ಆನೆಗುಂಡಿಯೆಂದು ಪ್ರಸಿದ್ಧಿ. ಬಲ್ಲಾಳರಾಜನು ವ್ಯೆಯುರಿ ತಡೆಯದೆ ಸುಬ್ರಹ್ಮಣ್ಯನನ್ನು ಪ್ರಾರ್ಥಿಸಲು "ನೀನು ಗುರುದೇವತಾದ್ರೋಹಪರಿಹಾರಕ್ಕಾಗಿ ದೇವಸ್ಥಾನದ ಸರ್ವಾಧಿಕಾರವನ್ನು ಅನಿರುದ್ಧತೀರ್ಥರಿಗೊಪ್ಪಿಸಿ, ನಿನ್ನದೊಂದು ಗೊಂಬೆಮಾಡಿಸಿ ನನ್ನ ದೇವಸ್ಥಾನದಲ್ಲಿಡು. ನನ್ನ ಭಕ್ತರು ನಿನಗರ್ಪಿಸುವ ಹತ್ತಿ ಬೆಣ್ಣೆ ಕುಂಬಳಕಾಯಿಗಳಿಂದ ನಿನ್ನ ಉರಿಯು ಶಾಂತವಾಗುವುದು" ಎಂದಪ್ಪಣೆಯಿತ್ತಂತೆ ನಡೆಸಿದನು. ಆ ಗೊಂಬೆಗೆ ಈಗಲೂ ಹತ್ತಿ ಮೊದಲಾದುದನ್ನು ಸಮರ್ಪಿಸುವ ಪದ್ಧತಿ ಇದೆ. ಈ ಸುಬ್ರಹ್ಮಣ್ಯದೇವಸ್ಥಾನಕ್ಕೂ ಸುಬ್ರಹ್ಮಣ್ಯ ಮಠಕ್ಕೂ ಮೈಸೂರು ಸಂಸ್ಥಾನದಿಂದ ಬಹಳ ಇನಾಮ್ ಗ್ರಾಮಗಳು ದೊರೆತಿವೆ. ಅಲ್ಲದೆ ಅನೇಕ ಸೇವೆಗಳು ನಡೆಯುತ್ತಿವೆ. ಈ ಕ್ಷೇತ್ರವು ಉಡುಪಿಯಿಂದ ಪೂರ್ವ ದಕ್ಷಿಣಕ್ಕೆ ಸುಮಾರು ನೂರು ಮೈಲು ದೂರದಲ್ಲಿದೆ.

# ಮಧ್ಯವಾಟ ಮಠ.

**ಸ್ನೇಹಾರ್ದ್ರಮಧ್ವಹೃದಯಾಖ್ಯದಶಾನುಷಕ್ತಂ ಮೋಹಾಖ್ಯಸಂತಮಸಕೃಂತನಶೀವ್ರಶಕ್ತಿಮ್ । ಶ್ರೀಮಧ್ಯವಾಟಮಠಪೌರುಟಭಾಜನಸ್ಥಂ ವ್ಯಾಸಪ್ರದೀಪಮಿಮಮಾದರತೋ ಭಜಧ್ವಮ್ ॥** ತೀರ್ಥಪ್ರಬಂಧ.

ನಡ್ಡಂತಾಡಿ ಮಠವು ಉಡುಪಿಯಿಂದ ಸುಮಾರು ಐವತ್ತು ಮೈಲು ದೂರ ದಕ್ಷಿಣದಲ್ಲಿರುತ್ತದೆ. ಶ್ರೀಮದಾಚಾರ್ಯರು ಸುಬ್ರಹ್ಮಣ್ಯಕ್ಕೆ ಹೋಗುವಾಗ ಅವರ ವಿಶ್ರಾಮಕ್ಕೆ ಮಧ್ಯಸ್ಥಾನ, ಅಥವಾ, ಮಾಧ್ಯಾಹ್ನಿಕಕೃತ್ಯಕ್ಕೆ ಯುಕ್ತವಾದ ಸ್ಥಾನವಾದುದರಿಂದ ಮಧ್ಯವಾಟ ತುಳು ಭಾಷೆಯಲ್ಲಿ ನಡ್ಡಂತಾಡಿ ಎಂತ ಪ್ರಸಿದ್ಧವಾಯಿತು. ಇಲ್ಲಿ ಗೌತಮ ಕುಂಡಿಕೆ, ಗದಾತೀರ್ಥ, ಶ್ರೀಮದಾಚಾರ್ಯರ ವ್ಯಾಸಸಾಲಿಗ್ರಾಮ, ಶ್ರೀಮದಾಚಾರ್ಯರು ಆ ಪ್ರದೇಶದಲ್ಲಿ ಮಠವಿಲ್ಲದೇ ಇರುವಾಗ ವಿಶ್ರಮಿಸಿಕೊಂಡ ಮಂಟಪವೂ ಇರುತ್ತವೆ. ಆ ಮಂಟಪದ ಸಮೀಪ ಪ್ರದೇಶಕ್ಕೆ ಈಗಲೂ ಚಂಡಾಲಾದಿಗಳು ಪ್ರವೇಶಿಸಕೂಡದು. ಈ ಕ್ಷೇತ್ರವನ್ನು ಶ್ರೀಮದ್ವಾದಿರಾಜರು ತೀರ್ಥಪ್ರಬಂಧದಲ್ಲಿ ವರ್ಣಿಸಿದ್ದಾರೆ. ಪೂರ್ವದಲ್ಲಿ ಉಡುಪಿಯಲ್ಲಿ ಎರಡು ವರ್ಷ ಪರ್ಯಾಯಾನಂತರ ಎರಡು ವರ್ಷ ಪರ್ಯಾಯಾರ್ಚನೆ ಈ ಸ್ಥಳದಲ್ಲಿಯೂ, ಅದರ ಮೇಲೆ ಎರಡು ವರ್ಷ ಕಡ್ತಿಲದಲ್ಲಿಯೂ ಪರ್ಯಾಯಪೂಜಾ ಪದ್ಧತಿ ಅಷ್ಟಶ್ರೀಗಳವರಲ್ಲಿಯೂ ಕ್ರಮೇಣ ಇರುತ್ತಿತ್ತೆಂದು ಪ್ರಸಿದ್ಧಿ ಇದೆ. ಈಗೀ ಮಠವು ಸೋದೇಶ್ರೀಗಳವರ ಅಧಿಕಾರದಲ್ಲಿದೆ.

---

# ಕಣ್ವತೀರ್ಥ.

**ಇತ್ಥಂ ಸದ್ಭಿಃ ಸದ್ಭಿರಚ್ಯೋರ್ಘರಾಯಾಂ ಚಕ್ರೇ ವಾಸಂ ಶೇಷಶಯ್ಯೇ ಶಯಾನೇ । ಗ್ರಾಮೇ ವಾತ್ಯೈಃ ಪಾವಿತೇ ಕಾಣ್ವತೀರ್ಥೈರ್ಭಕ್ತಪ್ರೀತ್ಯಾ ಸನ್ಮತೇಽನೂನಬೋಧಃ ॥** ಮಧ್ವವಿಜಯ.

ಉಡುಪಿಯಿಂದ ನಲವತ್ತನಾಲ್ಕು ಮೈಲು ದೂರದ ದಕ್ಷಿಣದಲ್ಲಿ ಕಣ್ವತೀರ್ಥವೆಂಬ ಪ್ರಸಿದ್ಧ ಕ್ಷೇತ್ರವಿದೆ. ಅಲ್ಲಿ ಶ್ರೀಮದಾಚಾರ್ಯರು ಚಾತುರ್ಮಾಸ್ಯ ಕಳೆದಿದ್ದರು. ಅಲ್ಲಿ ರಾಮತೀರ್ಥ ಕಣ್ವತೀರ್ಥ (ಅಥವಾ ಕಪಿಲತೀರ್ಥ)ಗಳಿವೆ. ಇಲ್ಲಿ ಕಣ್ವಮುನಿ ಕರಾರ್ಚಿತ ಶ್ರೀರಾಮಮೂರ್ತಿಯಿದೆ. ವಿಭೀಷಣನಿಗೆ ಹನುಮಂತದೇವರು "ತನ್ನ ಮೂರನೇ ಅವತಾರದಲ್ಲಿ ನಿನಗೆ ದರ್ಶನಕೊಡುವೆನೆಂದು" ವರ ಕೊಟ್ಟ ಪ್ರಕಾರ ಈ ಮಧ್ವಾವತಾರದಲ್ಲಿ ಈ ಕ್ಷೇತ್ರದಲ್ಲಿ ಶ್ರೀಮದಾಚಾರ್ಯರು ವಿಭೀಷಣನಿಂದ ಸೇವಿತರಾದರೆಂದು ಪ್ರಸಿದ್ಧಿಯಿದೆ. ಆ ಮಠದ ಪೂರ್ವದಲ್ಲಿ ಅಷ್ಟಶ್ರೀಪಾದಂಗಳವರಿಗೆ ಆಶ್ರಮಕೊಟ್ಟ ಸ್ಥಾನವಾದ ನಾಲ್ಕು ಬಾಗಿಲುಗಳುಳ್ಳ ಜೀರ್ಣವಾದೊಂದು ಅಶ್ವತ್ಥಕಟ್ಟೆಯು ಕಾಣಿಸುತ್ತದೆ. ಇದರ ನಾಲ್ಕು ಬಾಗಿಲುಗಳಲ್ಲಿ ಇಬ್ಬಿಬ್ಬರನ್ನಾಗಿ ಎಂಟು ಮಂದಿ ಶಿಷ್ಯರನ್ನು ಆಚಾರ್ಯರು ಹೊರಪಡಿಸಿ, ಆಗ ಕೂಡಿಕೊಂಡು ಬಂದ ಇಬ್ಬಿಬ್ಬರು ದ್ವಂದ್ವಸಂಸ್ಥಾನಿಕರೆಂದು ನಿಯಮ ಮಾಡಿದರು. ಈ ಕ್ಷೇತ್ರವು ಪುನಃ ಶ್ರೀಮತ್ಪೇಜಾವರ ಮಠದ ಲೋಕವಿಖ್ಯಾತರಾದ ಶ್ರೀಮದ್ವಿಜಯಧ್ವಜ ತೀರ್ಥಾಚಾರ್ಯರಿಂದ ಉದ್ಧರಿಸಲ್ಪಟ್ಟಿದೆ. ಇಲ್ಲಿ ವಿಜಯಧ್ವಜ ಪ್ರತಿಷ್ಠಿತ ಶ್ರೀ ಮುಖ್ಯಪ್ರಾಣನು ಪ್ರತ್ಯಕ್ಷಫಲದಾತನಾಗಿದ್ದಾನೆ. ವಿಜಯಧ್ವಜಾಚಾರ್ಯರು ಅಲ್ಲಿಯೇ ಸಮುದ್ರದ ಮಧ್ಯದಲ್ಲಿರುವ ಬಂಡೆಕಲ್ಲಿನಲ್ಲಿ ಕುಳಿತುಕೊಂಡು ಭಾಗವತಕ್ಕೆ ವ್ಯಾಖ್ಯಾನ ಮಾಡಿದ್ದಾರೆಂದು ಐತಿಹ್ಯವಿದೆ. ಆ ಬಂಡೆಕಲ್ಲು ಈಗಲೂ ಅನೇಕ ಅಕ್ಷರಗಳಿಂದ ಕೂಡಿಕೊಂಡು ದೃಷ್ಟಿಗೆ ಗೋಚರವಾಗುತ್ತದೆ. ಈ ಕ್ಷೇತ್ರದಲ್ಲಿ ತತ್ವಜ್ಞಾನಾಕಾಂಕ್ಷಿಗಳು ಶ್ರೀಮದ್ವಿಜಯಧ್ವಜತೀರ್ಥರ ವೃಂದಾವನವನ್ನು ಭಾಗವತ ಸಪ್ತಾಹವೇ ಮೊದಲಾದ ಸೇವೆಗಳಿಂದ ಸೇವಿಸಿ, ಮಂತ್ರಾಕ್ಷತಾನುಜ್ಞಾದಿ ರೂಪಗಳಿಂದ ಆ ಯತೀಶ್ವರರ ಅನುಗ್ರಹಕ್ಕೆ ಪಾತ್ರರಾಗುವರು. ಈ ಕಣ್ವತೀರ್ಥ ಮಠವು ಈಗ ಶ್ರೀಪೇಜಾವರಮಠದ ಶ್ರೀಪಾದಂಗಳವರ ಅಧಿಕಾರದಲ್ಲಿದೆ. ಅಲ್ಲಿ ನಿರಂತರ ಬ್ರಾಹ್ಮಣರಿಗೆ ಅನ್ನದಾನವು ನಡಿಯುತ್ತದೆ.

## ಕಟ್ಟೀತಿಲ.

**ತತೋ ದಯಾವಾರಿನಿಧಿರ್ಗ್ರಾಮೇ ಸೇತುತಿಲಾಹ್ವಯೇ।
ಸ್ವಶಾಸ್ತ್ರಗ್ರಂಥಮಕರೋದ್ಭೂಗತಂ ಪೂರ್ಣಶೇಮುಷಿಃ ॥**

ಹೃಷೀಕೇಶತೀರ್ಥೀಯ ಸಂಪ್ರದಾಯಪದ್ಧತಿ.

ಈ ಕಣ್ವತೀರ್ಥದಿಂದ ಪೂರ್ವ ಹದಿನೆಂಟು ಮೈಲು ದೂರದಲ್ಲಿ ಕಟ್ಟಿಲ (ಸೇತು ತಿಲ) ಎಂತ ಪ್ರಸಿದ್ಧವಾದಿನ್ನೊಂದು ಕ್ಷೇತ್ರವು ಆಚಾರ್ಯರಿಗೆ ಅಭಿಮತಸ್ಥಾನವು. ಇದು ಶ್ರೀಮದಾಚಾರ್ಯರು ತಮ್ಮ ಗ್ರಂಥಗಳನ್ನೂ, ವ್ಯಾಸಶಿಲೆಗಳನ್ನೂ ಸ್ಥಾಪಿಸಿದ ಸ್ಥಳ. ಈ ಸ್ಥಳದಲ್ಲಿ ಅದ್ಯಾಪಿ ಬಾಲ ಯತಿಗಳೇ ಶ್ರೀಮದಾಚಾರ್ಯದತ್ತವಾದ ರುಕ್ಮಿಣಿ ಸತ್ಯಭಾಮಾಲಂಕೃತ ಗೋಗೋಪಸೇವಿತಪಾರ್ಶ್ವಗಳುಳ್ಳ ದಿವ್ಯ ಶ್ರೀಕೃಷ್ಣ ಮೂರ್ತಿಯನ್ನರ್ಚಿಸುತ್ತಾರೆ. ಈ ಪುಸ್ತಕ ಸ್ಥಾಪನ ಸ್ಥಳದ ಮೇಲೆ ಒಂದು ಗೇಣು ಆಳವಾದೊಂದು ಕುಂಡಿಕೆಯು ವ್ಯಾಸತೀರ್ಥವೆಂದು ಪ್ರಖ್ಯಾತವಾಗಿದೆ. ತಾಮ್ರಶಾಸನರೂಪದಿಂದ ಗ್ರಂಥಸ್ಥಾಪನ ಮಾಡಿದ ಕಾರಣ ಈಗಲೂ ಈ ತೀರ್ಥಜಲದಲ್ಲಿ ತಾಮ್ರದ ಕಿಲುಬು ಕಾಣಿಸುತ್ತದೆ. ಆ ಪಾರ್ಶ್ವಕ್ಕೆ ವಿಜಾತೀಯರು ಪ್ರವೇಶಿಸಕೂಡದು. ಕಲಿದೋಷದಿಂದ ಲೋಕದಲ್ಲಿ ತತ್ವಜ್ಞಾನವು ನಷ್ಟವಾಗಲು, ಕುಮಾರಗಿರಿಯಿಂದ ಶ್ರೀ ವಿಷ್ಣುತೀರ್ಥಾಚಾರ್ಯರು ಬಂದು ಈ ಗ್ರಂಥಗಳನ್ನು ಉದ್ಧರಿಸಿ ತತ್ವಜ್ಞಾನವನ್ನು ಪ್ರಕಾಶಿಸುವರೆಂದು ಐತಿಹ್ಯವಿದೆ. ವೈಷ್ಣವನಾಗಿ ಜನಿಸಿದವನು ನಿಷ್ಕಪಟ ಭಕ್ತಿಯಿಂದ ಈ ಕ್ಷೇತ್ರಗಳನ್ನೆಲ್ಲಾ ಒಂದಾವರ್ತಿಯಾದರೂ ಸೇವಿಸಬೇಕು. ಈ ಒಂದೊಂದು ಕ್ಷೇತ್ರಗಳೂ ಮಹರ್ಷಿಗಳ ಆಶ್ರಮಗಳಂತೆಯೇ ಭಾವನೆಯನ್ನು ಹುಟ್ಟಿಸುವುವು.

---

## ಸಪ್ತಕ್ಷೇತ್ರಗಳು.

**ರೂಪ್ಯಪೀಠಂ ಕುಮಾರಾದ್ರಿಃ ಕುಂಭಾಸೀ ಚ ಧ್ವಜೇಶ್ವರಃ । ಕ್ರೋಡಗೋಕರ್ಣಮೂಕಾಂಬಾಃ ಸಪ್ತೈತೇ ಮೋಕ್ಷದಾಯಕಾಃ ॥**

ಬ್ರಹ್ಮಕ್ಷೇತ್ರದಲ್ಲಿ ಅಯೋಧ್ಯಾದಿ ಸಪ್ತಕ್ಷೇತ್ರಗಳಿರುವಂತೆ ಪರಶುರಾಮಕ್ಷೇತ್ರದಲ್ಲೂ ರೂಪ್ಯಪೀಠವೇ ಮೊದಲಾದ ಏಳು ಕ್ಷೇತ್ರಗಳು ಭಕ್ತರ ಅಭೀಷ್ಟಸಾಧಕಗಳಾಗಿವೆ. ಅವುಗಳಲ್ಲಿ ಒಂದನೇ **ರೂಪ್ಯಪೀಠ**ದ ಮಹಿಮೆಯನ್ನು ಮೊದಲೇ ಹೇಳಿದುದಾಯಿತು.

ಎರಡನೇ **ಕುಮಾರಾದ್ರಿ**ಯೆಂಬುವುದು ಸುಬ್ರಹ್ಮಣ್ಯಕ್ಷೇತ್ರವು. ಅದೂ ವರ್ಣಿತವಾಯಿತು.

ಮೂರನೇ **ಕುಂಭಾಸಿಕ್ಷೇತ್ರ**ವು ಉಡುಪಿಯಿಂದ ಉತ್ತರ 18 ಮೈಲು ದೂರದಲ್ಲಿದೆ ಇಲ್ಲಿ ಸೂರ್ಯಪುಷ್ಕರಿಣೀ ಚಂದ್ರಪುಷ್ಕರಿಣೀಯೆಂಬ ಎರಡು ಸರೋವರಗಳು ಅತ್ಯಂತ ನಿರ್ಮಲೋದಕದಿಂದ ನೋಡುವವರ ಕಣ್ಮನಗಳಿಗೆ ಆನಂದದಾಯಕ ಪವಿತ್ರ ತೀರ್ಥಗಳಾಗಿವೆ. ಅದರ ಮಧ್ಯದಲ್ಲಿ ಗೌತಮ ಮುನಿಗಳಿಗೆ ಪ್ರಸನ್ನರಾದ ಹರಿಹರಮೂರ್ತಿಗಳು ಲಿಂಗಾಕಾರದಿಂದ ಪರ್ವತಗುಹೆಯ ಬುಡದಲ್ಲಿ ನೆಲಗೊಂಡು ಭಕ್ತರಿಗೆ ಇಷ್ಟದಾಯಕರಾಗಿದ್ದಾರೆ. ಆ ತೀರ್ಥದ ಬಳಿಯಲ್ಲಿರುವ ಅಂದವಾದ ಆನೆಗುಡ್ಡೆಯೆಂದು ಪ್ರಸಿದ್ಧವಾದ ಬೆಟ್ಟದ ಮೇಲೆ ಶ್ರೀ ಭೀಮಸೇನದೇವರಿಂದ ಪೂಜಿತನಾದ ಸ್ವಯಂವ್ಯಕ್ತ ಗಣಪತಿದೇವನು ಭಜಕರಿಗೆ ಪ್ರತ್ಯಕ್ಷಫಲವನ್ನು ಕೊಡುತ್ತಾನೆ. ಇಲ್ಲಿ ಪ್ರತಿ ಸಂಕ್ರಮಣ ಬಹಳ ಜನರು ದೇವರ ದರ್ಶನಕ್ಕೆ ಸೇರುತ್ತಾರೆ. ಮಧುವನವೆಂದು ಪ್ರಸಿದ್ಧವಾದ ಈ ಸ್ಥಳದಲ್ಲಿ ಪಾಂಡವರು ಸಂಚರಿಸುವಾಗ ಕುಂಭಾಸುರನೆಂಬ ದೈತ್ಯನನ್ನು ಭೀಮಸೇನನು ಕೊಂದುದರಿಂದ ಈ ಕ್ಷೇತ್ರಕ್ಕೆ ಕುಂಭಾಸಿಯೆಂದು ಹೆಸರು ಬಂದಿತು. ಅಥವಾ "ಕುಂಭಕ"ನೆಂದರೂ ಕುಂಭನು ಆತನಿಗೆ ಅಸಿ ಎಂದರೆ ಖಡ್ಗವು. ಖಡ್ಗದಂತೆ ಭೀಮನು ಕೊಂದುದರಿಂದ ಕುಂಭಕಾಸಿ ಯೆಂದೂ ಪ್ರಸಿದ್ಧಿಯಿದೆ.

ನಾಲ್ಕನೇ **ಧ್ವಜೇಶ್ವರಕ್ಷೇತ್ರ**ವು ಕುಂಭಕಾಸಿಯಿಂದ ಒಂದುವರೆ ಮೈಲು ಉತ್ತರದಲ್ಲಿ ಈಗ ಕೋಟೇಶ್ವರವೆಂದು ಪ್ರಸಿದ್ಧವಾಗಿದೆ. ಇಲ್ಲಿ ಕೋಟಿಸಂಖ್ಯಾಕ ಮಹರ್ಷಿಗಳು ತಪಸ್ಸು ಮಾಡುತ್ತಿರಲು ಪಾರ್ವತೀ

ಪತಿಯು ಸರ್ವಮುನಿಗಳಿಗೂ ಒಂದೇ ಸಲ ಅನುಗ್ರಹಿಸಲಿಕ್ಕಾಗಿ ಕೋಟಿ ಲಿಂಗಾಕಾರಗಳಿಂದ ಪ್ರತ್ಯಕ್ಷನಾದನು. ಆ ಕೋಟಿ ಲಿಂಗಗಳೂ ಆ ದೇವಾಲಯದಲ್ಲಿ ಒಂದು ಭಾವಿಯಂತಿರುವ ಆ ಮುನಿಗಳ ತಪಃಕುಂಡಿಕೆಯಲ್ಲಿ ಈಗಲೂ ಪ್ರತ್ಯಕ್ಷ ತೋರುತ್ತವೆ. ಆದುದರಿಂದ ಕೋಟೀಶ್ವರ ಯೆಂದು ಆ ಕ್ಷೇತ್ರಕ್ಕೆ ಹೆಸರು ಪ್ರಸಿದ್ಧವಾಯಿತು. ಈ ದೇವಾಲಯದ ಉತ್ತರಪಾರ್ಶ್ವದಲ್ಲಿರುವ ಕೋಟಿತೀರ್ಥದಲ್ಲಿ ಸ್ನಾನವು ಪುಣ್ಯದಾಯಕವು. ಇಲ್ಲಿ ವೃಶ್ಚಿಕಮಾಸದ ಪೂರ್ಣಿಮಾ ರಥೋತ್ಸವವು ಬಹು ವಿಜೃಂಭಣೆಯಿಂದ ನಡೆಯುವುದು.

ಐದನೇ **ಕ್ರೋಡಕ್ಷೇತ್ರ**ವು ಕೋಟೀಶ್ವರದಿಂದ ಉತ್ತರಕ್ಕೊತ್ತಿ ಪೂರ್ವದಲ್ಲಿ ಸುಮಾರು ಹನ್ನೆರಡು ಮೈಲು ದೂರದಲ್ಲಿ ಕ್ರೋಡಶಂಕರ ನಾರಾಯಣವೆಂದು ಪ್ರಸಿದ್ಧವಾಗಿದೆ. ಇಲ್ಲಿ ಕ್ರೋಡಮುನಿಯು ತಪಸ್ಸು ಮಾಡಿದಾಗ ಕೆರೆಯ ಮಧ್ಯದಲ್ಲಿ ಶಂಕರ ನಾರಾಯಣರಿಬ್ಬರೂ ಲಿಂಗಾಕಾರದಿಂದ ಪ್ರತ್ಯಕ್ಷರಾಗಿದ್ದಾರೆ. ಈ ಲಿಂಗಗಳಲ್ಲಿ ನಾರಾಯಣ ಲಿಂಗವು ಎತ್ತರವಾಗಿಯೂ ಶಂಕರಲಿಂಗವು ಚಿಕ್ಕದಾಗಿಯೂ ಇದೆ. ಈ ದೇವಾಲಯದಲ್ಲಿ ಭಾರತ ಭಾಗವತ ರಾಮಾಯಣದಲ್ಲಿರುವ ಕಥಾ ನಾಯಕರ ಚಿತ್ರಗಳು ಮರದಲ್ಲಿ ಕೆತ್ತಿದವು ಬಹು ಅಂದವಾಗಿವೆ. ಆನೆಗುಂದಿ ರಾಜನು ದೇವರಸೇವೆಗಾಗಿ ಸಮರ್ಪಿಸಿದ ಚಿನ್ನದ ವರಕಿನ ಓಲಗಮಂಟಪವು ಚಿತ್ತಾಕರ್ಷಕವಾಗಿದೆ. ದೇವಾಲಯದ ಮುಂದೆ ವಿಶಾಲವಾದ ಕೋಟಿತೀರ್ಥವು ದೇವಾಲಯದ ಆಗ್ನೇಯದಲ್ಲಿ ಕ್ರೋಡ ತೀರ್ಥವು, ಅದರ ದಕ್ಷಿಣದಲ್ಲಿ ಕ್ರೋಡಮುನಿಗಳ ತಪಸ್ಸಿನ ಸ್ಥಳವಾದ ಕ್ರೋಡಪರ್ವತವೂ ಭಜಕರಿಗೆ ಆನಂದವನ್ನುಂಟುಮಾಡುತ್ತವೆ. ಈ ಕ್ಷೇತ್ರದ ದಕ್ಷಿಣ ಪಶ್ಚಿಮದಲ್ಲಿ ಶುಕ್ತಿಮತೀ ಯೆಂಬ ಪುಣ್ಯನದಿಯು ಹರಿಯುತ್ತಿದೆ.

ಆರನೇ **ಗೋಕರ್ಣ**ವು ಜಗತ್ಪ್ರಸಿದ್ಧವು. ಇಲ್ಲಿ ರಾವಣನು ತಂದ ರುದ್ರದೇವರ ಪ್ರಾಣಲಿಂಗವು ಸೇವಿಸಲಿಕ್ಕೆ ಯೋಗ್ಯವಾಗಿದೆ. ಇಲ್ಲಿ ರಾವಣನನ್ನು ಮೋಸಗೊಳಿಸಿ ಪ್ರಾಣಲಿಂಗವನ್ನು ಭೂಮಿಯಲ್ಲಿಟ್ಟಾಗ

ತಲೆಗೆ ರಾವಣನು ಹೊಡೆದ ಪೆಟ್ಟು ತೋರುವ ಗಣಪತಿಯು ಇದ್ದಾನೆ. ಈ ಕ್ಷೇತ್ರವು ದಕ್ಷಿಣಕಾಶಿಯೆಂದೇ ಪ್ರಸಿದ್ಧವಾದುದು. ಇಲ್ಲಿ ಶಿವರಾತ್ರಿ ಶಿವಯೋಗದಲ್ಲಿ ಮಹಾಬಲೇಶ್ವರನ ಸೇವೆಯು ಬಹು ಪುಣ್ಯದಾಯಕವು. ಈ ಕ್ಷೇತ್ರವು ಪ್ರಕೃತ ಉತ್ತರಕನ್ನಡಜಿಲ್ಲೆಗೆ ಸೇರಿರುತ್ತದೆ.

ಏಳನೇ **ಮೂಕಾಂಬಾಕ್ಷೇತ್ರ**ವು ಕೋಟೇಶ್ವರದಿಂದ ಸುಮಾರು 28 ಮೈಲು ದೂರ ಐಶಾನ್ಯದಿಕ್ಕಿನಲ್ಲಿ ಕೋಲಾಪುರವೆನಿಸಿದ ಕೊಲ್ಲೂರೆಂದು ಪ್ರಸಿದ್ಧವಾದ ಕ್ಷೇತ್ರವು. ಈ ಕ್ಷೇತ್ರದಲ್ಲಿ ಸಾಕ್ಷಾದ್ದುರ್ಗಾದೇವಿಯು ನೆಲೆಗೊಂಡಿದ್ದಾಳೆ. ಇಲ್ಲಿ ನವರಾತ್ರೆಯಲ್ಲಿ ಉತ್ಸವವು ಬಹು ವಿಜೃಂಭಣೆಯಿಂದ ನಡೆಯುವುದು. ಆಗ ಅನೇಕ ಭಾವಿಕ ಜನರು ದೇವೀ ಸೇವೆಯಿಂದ ಮಂತ್ರಜಪಸಿದ್ಧಿಯನ್ನು ಹೊಂದುತ್ತಾರೆ. ಈ ದೇವಾಲಯದ ಎದುರಿನಲ್ಲಿ ಅಗ್ನಿತೀರ್ಥ ನದಿಯು ಹರಿಯುತ್ತಾ ಪಶ್ಚಿಮೋತ್ತರಗಾಮಿನಿಯಾಗಿ ಸೌಪರ್ಣಿಯೆನಿಸುತ್ತದೆ. ಈ ಕ್ಷೇತ್ರದ ಪೂರ್ವದಲ್ಲಿ ಸಹ್ಯಪರ್ವತಕ್ಕೆ ಸೇರಿದ ಕೊಡಶಾದ್ರಿಯೆಂಬೊಂದು ಎತ್ತರವಾದ ಬೆಟ್ಟದಲ್ಲಿ ಕೊಡಶಮುನಿಯ ತಪಸ್ಸ್ಥಾನ ಮಂಟಪ ಕುಂಡಿಕೆ ಮೊದಲಾದವು ಇರುತ್ತವೆ. ಇಲ್ಲಿ ತಪಸ್ಸು ಮಾಡಿದವರಿಗೆ ಶೀಘ್ರ ಫಲಸಿದ್ಧಿಯು. ಮತ್ತು ಇಲ್ಲಿರುವ ಸಸ್ಯಗಳು ಔಷಧಗಳಾಗಿವೆ. ಈ ಸಪ್ತಕ್ಷೇತ್ರಗಳನ್ನು ಪ್ರತ್ಯಕ್ಷ ನೋಡದ ಹೊರತು ಅಲ್ಲಿನ ಮಹಿಮೆಗಳು ಸ್ಪಷ್ಟವಾಗಿ ತಿಳಿಯಲಾರವು. ಭಜಕರಾದವರು ಅವಶ್ಯವಾಗಿ ಸುಲಭಸಾಧ್ಯಗಳಾದ ಈ ಸಪ್ತಕ್ಷೇತ್ರಗಳನ್ನು ನೋಡತಕ್ಕದ್ದು. ಗೋಕರ್ಣವನ್ನು ಬಿಟ್ಟು ಉಳಿದ ಆರು ಕ್ಷೇತ್ರಗಳೂ ಪ್ರಕೃತ ದಕ್ಷಿಣಕನ್ನಡವೆನಿಸುವ ತೌಳವಮಂಡಲದಲ್ಲಿಯೇ ಇವೆ.

# ಭಂಡಾರಿಕೇರಿ ಮಠ.

**ಶ್ರೀಮತ್ಸುರೇಂದ್ರತೀರ್ಥಾರ್ಯಪೂಜ್ಯಮಾರುತಿಸೇವಿತೌ । ಶ್ರೀಗೋಪೀಜಾನಕೀನಾಥೌ ಸರ್ವದೇಷ್ಟಪ್ರದೌ ಸತಾಮ್ ॥**

ಶ್ರೀಮಧ್ವಾಚಾರ್ಯರ ಗುರುಗಳಾದ ಅಚ್ಯುತಪ್ರೇಕ್ಷಾಚಾರ್ಯರ ಸಂಸ್ಥಾನವೇ ಭಂಡಾರಿಕೇರಿ ಮಠವು. ಇಲ್ಲಿ ಪಾಂಡವರ ಪರಂಪರೆಯಿಂದ ಜನಮೇಜಯನು ಪೂಜಿಸಿದ ಗೋಪೀನಾಥದೇವರು, ಮತ್ತು ಶ್ರೀಮಧ್ವಾಚಾರ್ಯರು ಸತ್ಯತೀರ್ಥರಿಗೆ ಕೊಟ್ಟಿದ್ದ ರಾಮದೇವರು ಇದ್ದಾರೆ. ಹಾಗೆ ಈ ಪರಂಪರೆಯಲ್ಲಿ ಪೀಠಾಧಿರೂಢರಾಗಿದ್ದ ಶ್ರೀಮದ್ವಾದಿರಾಜತೀರ್ಥರ ಸಹೋದರರಾದ ಶ್ರೀ ಸುರೇಂದ್ರತೀರ್ಥರು ಪ್ರತಿಷ್ಠಿಸಿದ ಶ್ರೀ ಮುಖ್ಯಪ್ರಾಣದೇವರು ಪ್ರತ್ಯಕ್ಷ ಫಲದಾಯಕರಾಗಿದ್ದಾರೆ. ಮತ್ತು ಸುರೇಂದ್ರತೀರ್ಥರು ಕೆರೆಯ ಬದಿಯಲ್ಲಿ ಭೂತರಾಜರನ್ನು ಪ್ರತಿಷ್ಠೆ ಮಾಡಿದ್ದಾರೆ. ಇಲ್ಲಿ ಮಹಾತ್ಮರಾದ ಸುರೇಂದ್ರತೀರ್ಥರ ವೃಂದಾವನವಿದೆ. ಈ ಮಠವು ಮುನಿಗಳ ಆಶ್ರಮದಂತೆ ಯತಿಗಳ ಆವಾಸಕ್ಕೆ ಅತಿ ಯೋಗ್ಯ ಸ್ಥಳವಾಗಿದೆ. ಉಡುಪಿಯಿಂದ ಸುಮಾರು 11 ಮೈಲು ದೂರ ಉತ್ತರದಲ್ಲಿ ಬ್ರಹ್ಮಾವರ ಮಾರ್ಗವಾಗಿ ಬಾರ್ಕೂರಿಗೆ ಹತ್ತಿರದಲ್ಲಿದೆ. ಈ ಸಂಸ್ಥಾನದ ಇನ್ನೊಂದು ಶಾಖೆಯೇ ಭೀಮನಕಟ್ಟೆ ಮಠವು.

## ಹೂವಿನಕೆರೆ ಮಠ.

**ತಟಾಕೇ ಕುಸುಮಾನಾಂ ಯೋ ಕುಂಭಾಸಿನಿಕಟೇಚಿರಾತ್ । ಋಜುಸ್ಸುತಪ್ತತಪಸೋ ವಾಗೀಶವರತೋ ದ್ವಿಜಾತ್ । ಜಜ್ಞೇ ಸ ಗೌರ್ಯಾಂ ಕೇದಾರೇऽರಣ್ಯೇ ಪುಣ್ಯಭುವಿ ಪ್ರಭುಃ ॥**

**ವಾದಿರಾಜಸ್ತೋತ್ರ.**

ಈ ಮಠವು ಭಾವಿ ವಾಯುದೇವರಾದ ಶ್ರೀಮದ್ವಾದಿರಾಜ ಮುನಿಗಳ ಜನ್ಮಭೂಮಿಯಾದ ಹೂವಿನಕೆರೆ ಗ್ರಾಮದಲ್ಲಿದೆ. ಇಲ್ಲಿ ವಾಗೀಶತೀರ್ಥರ ಅನುಗ್ರಹದಿಂದ ಪೈರು ತಿನ್ನಲಕ್ಕೆ ಬಂದಿದ್ದ ದನವನ್ನೋಡಿಸಲು ಹೋಗಿದ್ದ ಗರ್ಭಿಣಿಯು ಗದ್ದೆಯಂಚಿನಲ್ಲಿ ಆ ಪುತ್ರರತ್ನವನ್ನು ಹೆತ್ತಿದ್ದಕ್ಕೆ ಗುರುತಾಗಿ ಗದ್ದೆಯಲ್ಲಿ ಒಂದು ಮಂಟಪವೂ ಅದರ ದಕ್ಷಿಣದಲ್ಲಿ ಮಠವೂ ಅದರ ಬಳಿ ಕೆರೆಯೂ ಇದೆ. ಅಲ್ಲಿ ಶ್ರೀ ಹಯಗ್ರೀವ

ದೇವರ ಪೂಜೆಯು ಈಗಲೂ ನಡೆಯುತ್ತಿದೆ. ಗುರುಗಳ ಜನ್ಮಪೆತ್ತಿದ ಗದ್ದೆಯ ಅಕ್ಕಿಯು ಈಗಲೂ ಸೋದೆಯಲ್ಲಾಗುವ ಶ್ರೀ ವಾದಿರಾಜರ ಪುಣ್ಯದಿನದ ದೇವರಸಮರ್ಪಣೆಗೆ ಕೊಂಡೊಯ್ಯುವ ಪದ್ಧತಿಯಿದೆ. ಈ ಮಠವು ಕುಂಭಾಸಿಯಿಂದ ಪೂರ್ವಕ್ಕೆ ೨ ಮೈಲು ದೂರದಲ್ಲಿದೆ. ಇಲ್ಲಿ ಸೋದಾ ವಾದಿರಾಜ ಮಠದ ಶ್ರೀಪಾದಂಗಳವರು ವೃತ್ತಿ ಕೊಟ್ಟು ಬ್ರಾಹ್ಮಣರನ್ನಿಟ್ಟು ಪೂಜಾದಿ ವಿನಿಯೋಗಗಳನ್ನು ಈಗಲೂ ನಡಿಸುತ್ತಿದ್ದಾರೆ.

ಶ್ರೀಮದ್ವಾದಿರಾಜತೀರ್ಥರೆಂದರೆ ಮುಂದೆ ವಾಯುದೇವರಾಗತಕ್ಕ ಲಾತವ್ಯರೆಂಬ ಋಜುಗಣದ ದೇವತೆಗಳಲ್ಲಿ ಶ್ರೇಷ್ಠರು. ಇವರೇ ಹಿಂದಿನ ಜನ್ಮದಲ್ಲಿ ರುಕ್ಮಿಣಿಯ ಪತ್ರವನ್ನು ಶ್ರೀಕೃಷ್ಣನಿಗೆ ತಂದುಕೊಟ್ಟವರು. ಈ ಮಹನೀಯರು ಲಿಂಗಾಯತ ಗುರುವನ್ನು ಗೆದ್ದು ಸೋದಾ ರಾಜನು ಜಾಹೀರು ಬಿಟ್ಟ ಸೋದಾ ಪಟ್ಟಣದಲ್ಲಿ ತ್ರಿವಿಕ್ರಮದೇವರನ್ನು ಪ್ರತಿಷ್ಠೆ ಮಾಡಿ, ವಿಜಯನಗರದ ಅರಸನಿಂದ ಸಿಂಹಾಸನ ಮುತ್ತಿನ ತುರಾಯಿ ಮುಂತಾದ ಬಿರುದುಗಳನ್ನು ಪಡೆದವರು. ಇವರ ಪಂಚ ವೃಂದಾವನ ಸೋದೆಯಲ್ಲಿದೆ.

## ಶ್ರೀಮಧ್ವಭಕ್ತರಾದ ಗೃಹಸ್ಥರು.

**ಬಹವೋ ಗೃಹಿಣೋಽಸ್ಯ ಸ್ಮಿನ್ ಸಮಗ್ರಾನುಗ್ರಹಂ ಯಯುಃ । ದೀಪ್ತಾ ಯತ್ರಾಗ್ನಯ ಇವ ತ್ರಯೋ ಲಿಕುಚ-ಶೇಖರಾಃ ॥**

ಸುಮಧ್ವವಿಜಯ

ಕಾಸರಗೋಡು ತಾಲೂಕಿನಲ್ಲಿ ಕಾವು ಮಠವೆಂತ ಪ್ರಸಿದ್ಧವಾದ ಸ್ಥಳವು ತ್ರಿವಿಕ್ರಮಾಚಾರ್ಯರ ಮನೆಯು. ಇಲ್ಲಿ ಆಚಾರ್ಯದತ್ತವಾದ ಲಕ್ಷ್ಮೀನಾರಾಯಣಪ್ರತಿಮೆಯು ಇದೆ. ಪೆಜತಾಯ (ಲಿಕುಚ) ವಂಶಸ್ಥರಾದ ತ್ರಿವಿಕ್ರಮಪಂಡಿತಾಚಾರ್ಯರ ಮತ್ತು ಅವರ ಪುತ್ರರಾದ

ನಾರಾಯಣಪಂಡಿತಾಚಾರ್ಯರ ವೃಂದಾವನಗಳಿವೆ. ಆ ಮನೆಯ ದಕ್ಷಿಣದಲ್ಲಿ ಆಚಾರ್ಯರು ಸ್ಥಾಪಿಸಿದ ಧ್ವಜಸ್ತಂಭವು 'ಅದರ ದಕ್ಷಿಣ ಮಧ್ಯ ಕೇರಳಪ್ರದೇಶ. ಅದು ವೈಷ್ಣವರಿಗೆ ಅಯೋಗ್ಯಸ್ಥಳವೆಂದು' ಆಚಾರ್ಯರ ಸಂಕಲ್ಪವನ್ನು ಸ್ಪಷ್ಟವಾಗಿ ಸೂಚಿಸುತ್ತದೆ.

ಸುಬ್ರಹ್ಮಣ್ಯದ ಸಮೀಪದಲ್ಲಿ ನೇರಂಕೀ ಎಂತ ಪ್ರಸಿದ್ಧವಾದ ಗ್ರಾಮದಲ್ಲಿ ಎರ್ಕೆಮಠವೆಂಬ ಒಂದು ಮಠವಿದೆ. ಇಲ್ಲಿ ಸೂರಿತಾಯ ರೆಂಬ ಸ್ವಭಕ್ತಾಗ್ರಣಿಗಳಿಗೆ ಶ್ರೀಮದಾಚಾರ್ಯರು ಕೇಶವಮೂರ್ತಿ ಯನ್ನು ಕೊಟ್ಟಿದ್ದಾರೆ. ಇಲ್ಲಿ ಆಚಾರ್ಯರು ದಂಡೋದಕ ಮಾಡಿದ ದಂಡತೀರ್ಥವೆಂಬ ತೀರ್ಥವಿದೆ ಈ ತೀರ್ಥದ ಮೇಲೆ ಪಶ್ಚಿಮಭಾಗ ದಲ್ಲಿ ಶ್ರೀಕೃಷ್ಣನು ಪಾರ್ಶ್ವಗಳಲ್ಲಿ ಹನುಮಂತ ಗರುಡರು ಇರುವ ದೇವ ಸ್ಥಾನವು ಇದೆ. ಆ ಕೇಶವಮೂರ್ತಿಯನ್ನು ಆ ಸದ್ವಂಶಸ್ಥರು ವಿಧ್ಯುಕ್ತ ಪೂಜಾದಿಗಳಿಂದ ಸೇವಿಸುತ್ತಾರೆ.

ಅದರ ಸಮೀಪದಲ್ಲಿರುವ ಬಳ್ಪ ಎನ್ನುವ ಇನ್ನೊಂದು ಗ್ರಾಮದಲ್ಲಿ ಇಡಪಾಡಿ ಎನ್ನುವ ಸತ್ಕುಲಜರಿಗೆ ವಾಸುದೇವಮೂರ್ತಿಯನ್ನು ಆಚಾ ರ್ಯರು ಕೊಟ್ಟಿದ್ದಾರೆ. ಈಗಾ ವಂಶಸ್ಥರೇ ಅಲ್ಲಿ ಪೂಜಾ ವಿನಿಯೋಗ ಗಳನ್ನು ನಡಿಸುತ್ತಾರೆ. ಆ ಕುಲವನ್ನೇ ಈ ಕಾಲದಲ್ಲಿರುವ ಕಾಣೂರು ಮಠದ ವಿದ್ಯಾಸಮುದ್ರತೀರ್ಥ ಶ್ರೀಪಾದಂಗಳವರು ಸ್ವಜನ್ಮದಿಂದ ಅಲಂ ಕರಿಸಿದ್ದಾರೆ.

ಮೂಡಿಲ್ಲಾಯ (ಪೂರ್ವಾಲಯ, ಮೂಡುಮನೆ) ಈ ವಂಶಸ್ಥ ರಿಗೆ ದಶಾವತಾರಯುಕ್ತವಾದ ಶ್ರೀಲಕ್ಷ್ಮೀನಾರಾಯಣಪ್ರತಿಮೆಯನ್ನು ಆಚಾರ್ಯರು ಕೊಟ್ಟಿದ್ದಾರೆ. ಈ ಮನೆಯು ಉಡುಪಿಯಿಂದ ದಕ್ಷಿಣ ಒಂದು ಮೈಲು ದೂರ ಚಿಟ್ಟುಪಾಡಿ ಎಂಬಲ್ಲಿದೆ. ಈಗಲೂ ಮಠೀಯ ಸಂಪ್ರದಾಯಾನುಗುಣವಾಗಿ ಪೂಜಾಕ್ರಮವು ಆ ದೇವರಿಗೆ ನಡೆಯು ತ್ತದೆ. ಪರ್ಯಾಯ ಶ್ರೀಪಾದಂಗಳವರು ಪರ್ಯಾಯಕ್ಕೆ ಈ ಪೂರ್ವಾ ಲಯಕ್ಕೆ ಹೋಗಿ, ಆಮಂತ್ರಣ ಕೊಟ್ಟು ಬರುವ ಸಂಪ್ರದಾಯವಿದೆ.

ಈ ಪ್ರಕಾರ ಶ್ರೀಮದಾಚಾರ್ಯರು ಅಷ್ಟಶ್ರೀಪಾದಂಗಳವರಿಗೆ ಕ್ರಮವಾಗಿ ಶ್ರೀರಾಮ, ಚತುರ್ಭುಜ ಕಾಲೀಯಮಥನ, ದ್ವಿಭುಜ ಕಾಲೀಯಮಥನ, ವಿಠ್ಠಲ, ವಿಠ್ಠಲ, ವರಾಹ, ನೃಸಿಂಹ, ವಿಠ್ಠಲ ಈ ಎಂಟು ಪ್ರತೀಕಗಳನ್ನೂ, ಶ್ರೀಮತ್ಪದ್ಮನಾಭತೀರ್ಥರಿಗೆ ರಾಮಮೂರ್ತಿಯನ್ನೂ ಕೊಟ್ಟು, ಬದರಿಯಿಂದ ತಂದ ಅಷ್ಟ ವ್ಯಾಸಮೂರ್ತಿಗಳಲ್ಲಿ ಐದು ಮೂರ್ತಿಗಳನ್ನು ಕಣ್ವತೀರ್ಥದಲ್ಲಿ ಸ್ಥಾಪಿಸಿ, ಒಂದನ್ನು ಸುಬ್ರಹ್ಮಣ್ಯದಲ್ಲಿ, ಒಂದನ್ನು (ಅಷ್ಟಮಠಕ್ಕೆ) ಮಧ್ಯತಲದಲ್ಲಿ, ಒಂದನ್ನು ಪದ್ಮನಾಭತೀರ್ಥರಿಗೆ ಕೊಟ್ಟರು. ಶ್ರೀಮದಾಚಾರ್ಯರು ಗೃಹಸ್ಥಾಶ್ರಮಿಗಳಲ್ಲಿ ಹಿಂದೆ ಹೇಳಿದ ಪೆಜತ್ತಾಯ ಕುಲದ ಪಂಡಿತಾಚಾರ್ಯರಿಗೆ ಲಕ್ಷ್ಮೀನಾರಾಯಣಮೂರ್ತಿ, ಮೂಡಿಲ್ಲಾಯ (ಪೂರ್ವಾಲಯದವ)ರಿಗೆ ಲಕ್ಷ್ಮೀನಾರಾಯಣಮೂರ್ತಿ, ಎರ್ಕಮಠದ ನೂರಿತ್ತಾಯರಿಗೆ ಕೇಶವಮೂರ್ತಿ, ಬಳ್ಳದ ಇಡಪಾಡಿತ್ತಾಯರಿಗೆ ವಾಸುದೇವಮೂರ್ತಿ, ಕೊಡಿಪಾಡಿತ್ತಾಯರಿಗೆ ಅನಂತಾಸನಮೂರ್ತಿ, ಮಂಜನಾಡಿ ಬಲ್ಲಾಳರಿಗೆ ತಾಂಡವ ಕೃಷ್ಣಮೂರ್ತಿ, ಕುಂಜಣ್ಣಾಯರಿಗೆ ಕೃಷ್ಣಮೂರ್ತಿ, ತೋಟಂತಿಲ್ಲಾಯರಿಗೆ ಕುಂಚಿಕೃಷ್ಣಮೂರ್ತಿ, ಎರಕಟ್ಟೆತ್ತಾಯರಿಗೆ ಭೂಪತಿಯೆಂಬ ಉಪವಿಷ್ಟ ಭೂವರಾಹಮೂರ್ತಿ ಈ ರೀತಿ ಒಂಭತ್ತು ಪ್ರತಿಮಾಗಳನ್ನು ಕೊಟ್ಟಿದ್ದಾರೆ. ಇನ್ನು ಪಾಂಗಣ್ಣಾಯರಿಗೂ ಕಾಸ್ರೋವ ಯೆಂಬ ಕುಲದವರಿಗೂ ಪ್ರತಿಮಾ ಕೊಟ್ಟಿದ್ದಾರೆ. ಅದರ ಹೆಸರು ತಿಳಿದಿಲ್ಲ. ಈಗ ಕುಂಜಣ್ಣಾಯ ಕೃಷ್ಣವಿಗ್ರಹವು ಸೋದೇ ಮಠದಲ್ಲಿಯೂ, ಮಂಜನಾಡಿ ತಾಂಡವಕೃಷ್ಣವಿಗ್ರಹವು ಫಲಿಮಾರು ಮಠದಲ್ಲಿಯೂ ಇದ್ದಾವೆ.

ಹಾಗೆಯೇ ಶ್ರೀಮದ್ವಾದಿರಾಜತೀರ್ಥಶ್ರೀಗಳವರು ಭೂವರಾಹ ದೇವರನ್ನು ಕೊಟ್ಟಿದ್ದ ಪಕ್ಷಿಮಾಲಯವು ಉಡುಪಿಯಿಂದ ಒಂದು ಮೈಲು ಪಶ್ಚಿಮ ನಿಡಂಬೂರೆಂಬಲ್ಲಿ ಪ್ರಸಿದ್ಧವಾಗಿದೆ. ಇಲ್ಲಿಯೂ ಮಠೀಯ ಕ್ರಮದಂತೆಯೇ ಆ ದೇವರ ಪೂಜಾದಿಗಳನ್ನು ಆ ಮನೆಯ ಸದ್ಗೃಹಸ್ಥರು ನಡಿಸುತ್ತಾರೆ. ಇಲ್ಲಿ ಶ್ರೀ ವಾದಿರಾಜತೀರ್ಥಪ್ರತಿಷ್ಠಿತ ಹನುಮ ದ್ಭೀಮಮಧ್ವ ಈ ಮೂರು ಅವತಾರಸೂಚಕ ಶ್ರೀಮುಖ್ಯಪ್ರಾಣ

ಮೂರ್ತಿ ಇದೆ. ಪರ್ಯಾಯಾರಂಭದಲ್ಲಿ ಪರ್ಯಾಯ ಶ್ರೀಪಾದಂಗಳವರು ಇಲ್ಲಿಯೂ ದೇವರಿಗೆ ಅಭಿವಂದಿಸಿ ಆಮಂತ್ರಣಕೊಡುವ ಸಂಪ್ರದಾಯವಿದೆ.

ಇದೇ ರೀತಿ ಸೋದಾ ಮಠದ ವೃಂದಾವನಾಚಾರ್ಯರೆಂದು ಪ್ರಸಿದ್ಧರಾದ ಇಂದ್ರಾಂಶಸಂಭೂತರಾದ ವಿಶ್ವಪ್ರಿಯತೀರ್ಥರು ಬಾಲ್ಯದಿಂದ ತನ್ನ ಸೇವಕರಾದೊಬ್ಬ ಬ್ರಾಹ್ಮಣನಿಗೆ ಸನ್ಯಾಸ ಕೊಟ್ಟು ವರಾಹತೀರ್ಥರೆಂಬ ನಾಮವನ್ನಿಟ್ಟು ಎರಕಟಿತಾಯ ಭೂಪತಿಮೂರ್ತಿಯನ್ನು ಉಪಾಸನಾಮೂರ್ತಿಯನ್ನಾಗಿ ಮಾಡಿ ಅನುಗ್ರಹಿಸಿದರು. ಹಾಗೆಯೇ ಈ ಕಾಲದಲ್ಲಿ ಈ ಶ್ರೀ ವರಾಹತೀರ್ಥರಿಗೆ ಪೂರ್ವಾಶ್ರಮದಲ್ಲಿ ಅಳಿಯನಾದ ಚತುಸ್ತಂತ್ರಪಂಡಿತರಾದ ಶ್ಯಾಮಾಚಾರ್ಯರಿಗೆ ತೋಟಂತಿಲ್ಲಾಯ ಕುಂಚಿಕೃಷ್ಣಮೂರ್ತಿಯನ್ನೂ ಕೆಮ್ಮುಂಡೆಲಿನವರಿಗೆ ಶ್ರೀವಾದಿರಾಜತೀರ್ಥರಿಂದ ದತ್ತವಾದ ಲಕ್ಷ್ಮೀನಾರಾಯಣಮೂರ್ತಿಯನ್ನೂ, ಕೊಡಿಪಾಡಿತಾಯರ ಅನಂತಾಸನಮೂರ್ತಿಯನ್ನೂ, ವೈಕುಂಠದಾಸರಿಗೆ ವಾದಿರಾಜದತ್ತ ಹಯಗ್ರೀವ ಸಾಲಿಗ್ರಾಮವನ್ನೂ, ಕೊಟ್ಟು ಅನುಗ್ರಹಿಸಿದರು. ಈ ವರಾಹತೀರ್ಥರ ದೇವರು ಉದ್ಯಾವರದ ಶ್ಯಾಮಾಚಾರ್ಯರ ಮನೆಯಲ್ಲಿದ್ದಾರೆ. ಈ ಶ್ರೀಗಳವರ ತರುವಾಯ ಅವರ ಪುತ್ರರೂ ಈಗ ಅವರ ಅಳಿಯಂದಿರೂ ಈ ದೇವತಾ ಪೂಜೆಗಳನ್ನು ಸಂಸ್ಥಾನ ಕ್ರಮದಂತೆ ನಡಿಸುತ್ತಲಿದ್ದಾರೆ.

## ಆಚಾರ್ಯರ ಅಂತರ್ಧಾನ.

**ಏಕೋನಾಶೀತಿವರ್ಷಾಣಿ ನೀತ್ವಾ ಮಾನುಷದೃಷ್ಟಿಗಃ ।**
**ಪಿಂಗಲಾಬ್ದೇ ಮಾಘಶುಕ್ಲನವಮ್ಯಾಂ ಬದರೀಂ ಯಯೌ ॥**

**ಹೃಷೀಕೇಶತೀರ್ಥೀಯ ಸಂಕ್ಷಿಪ್ತ ಚರಿತ.**

ಶ್ರೀಮದಾಚಾರ್ಯರು ಅನಂತೇಶ್ವರದ ಒಳಗಡೆಯಲ್ಲಿ ಶಿಷ್ಯರಿಗೆ ಪಾಠಹೇಳುತ್ತಿದ್ದರು. ಒಂದು ಸಮಯದಲ್ಲಿ ಪ್ರವಚನ ಮಾಡುತ್ತಿರು

ವಾಗಲೇ ಆ ಸ್ಥಳದಿಂದ ಕಲಿ. ೪೪೧೮ ಪಿಂಗಲ ಸಂವತ್ಸರದ ಮಾಘ ಶುದ್ಧ ನವಮೀ ತಿಥಿಯಲ್ಲಿ ಅದೃಶ್ಯರಾದರು. ಆ ಸ್ಥಳದಲ್ಲಿಯೇ ದೇವಾಲಯ ಮಧ್ಯದಲ್ಲಿ ಶ್ರೀಮದಾಚಾರ್ಯರ ಗುಡಿಯಿದೆ. ಪೂರ್ವದಲ್ಲಿ ಒಮ್ಮೆ ಮೂಢರ ಭಕ್ತಿದಾರ್ಢ್ಯಕ್ಕಾಗಿ ಆ ಸ್ಥಳದಲ್ಲಿ ಶ್ರೀಮದಾಚಾರ್ಯರ ಪ್ರತಿಮೆಯನ್ನು ಭಕ್ತರು ಸ್ಥಾಪಿಸಬೇಕೆಂದು ಉಪಕ್ರಮಿಸಿದಾಗ ರಾತ್ರಿಯಲ್ಲಿ "ಮೂಢರೇ! ನನ್ನ ತಲೆಯ ಮೇಲೆ ಕಲ್ಲು ಇಡಬೇಡಿರಿ. ನಾನೊಂದು ಅಂಶದಿಂದ ಅದೃಶ್ಯನಾಗಿ ಇಲ್ಲಿ ಸನ್ನಿಹಿತನಾಗಿದ್ದೇನೆ. ಇನ್ನೊಂದು ಕಲೆಯಿಂದ ಕೃಷ್ಣಪೂಜೆಯಲ್ಲಿ ಪಟ್ಟಾಭಿಷಿಕ್ತನಾದ ಈ ನನ್ನ ಪರಂಪರೆಯ ಯತಿಯಲ್ಲಿ ಸನ್ನಿಹಿತನಾಗಿರುತ್ತೇನೆಂದು" ಆಜ್ಞಾಪಿಸಿದರು. ಆ ಕಾರಣ ಈಗಲೂ ಆ ಗುಡಿಯಲ್ಲಿ ಪ್ರತಿಮೆಯು ಇರುವುದಿಲ್ಲ. ಅದಕ್ಕೆ ಗುರುತಾಗಿ ಅಲ್ಲಿ ಪ್ರತಿಷ್ಠೆ ಮಾಡಿದ ಆ ಪ್ರತಿಮೆಯು ಅನಂತೇಶ್ವರದ ಒಳಗಿರುವುದು. ಆ ಸ್ಥಳದಲ್ಲಿ ಒಂದಾವರ್ತಿ ವಾಯುಸ್ತುತಿಯಿಂದ ಅಭಿಷೇಕ ಮಾಡಿಸಿದರೆ ಜನ್ಮಜನ್ಮಾಂತರದಲ್ಲಿ ವೈಷ್ಣವನಾಗಿ ತತ್ವಜ್ಞಾನಿಯಾಗುತ್ತಾನೆ. ಆ ಅಭಿಷಿಕ್ತ ತೀರ್ಥವು ಜನ್ಮಾಂತರದ ಪಾಪವನ್ನು ಪರಿಹರಿಸುತ್ತದೆ. ಯಾರು ಆ ತೀರ್ಥವನ್ನುಪೇಕ್ಷಿಸುತ್ತಾನೋ, ಅವನು ಆಚಾರ್ಯರ ದ್ವೇಷಿಯಾಗಿ ಅಂಧತಮಸ್ಸಿಗೆ ಗುರಿಯಾಗುತ್ತಾನೆ.

---

## ತ್ರಿಕಾಲಭೇರೀತಾಡನ.

**ವ್ಯರ್ಥಂ ಕಿಮರ್ಥಂ ಕುರುಥ ಕಾಲಂ ಗೋಪಾಲ-ಮಂಜಸಾ । ತ್ರಿಕಾಲಮಪಿ ಸೇವಧ್ವಮಿತಿ ಭೇರೀ ಪ್ರಗರ್ಜತಿ ॥**

ನಮ್ಮ ಭಾರತೀಯರಾದ ಅರಸರ ಸಂಸ್ಥಾನಗಳಲ್ಲಿಯೂ, ಮಹಾ ಕ್ಷೇತ್ರಗಳಲ್ಲಿಯೂ, ಬೆಳಿಗ್ಗೆ, ಮಧ್ಯಾಹ್ನ, ಸಾಯಂಕಾಲ ಈ ಮೂರು ಸಮಯಗಳಲ್ಲಿ ಭೇರಿ (ನಗಾರಿ) ಅಥವಾ ವಾದ್ಯಘಂಟಾದಿಗಳು ಬಾರಿಸಲ್ಪಡುವಂತೆ ಈ ಉಡುಪಿ ಶ್ರೀಕೃಷ್ಣದೇವರ ಮಠದಲ್ಲಿಯೂ ತ್ರಿಕಾಲದಲ್ಲಿ

ನಗರಿ ಕ್ರಮವಾಗಿ ಬಾರಿಸಲ್ಪಡುತ್ತದೆ. ಈ ಶಬ್ದವು ಇನ್ನು ಹೊಸತಾದ ಪ್ರಾತರಾದಿ ಸಮಯವು ಪ್ರಾಪ್ತವಾಗುವುದೆಂದು ಸೂಚಿಸುವುದರಿಂದ ಹೊಸಹೊತ್ತೆಂಬರ್ಥ ಕೊಡುವ "ನವಪೊತ್ತು" (ನವಪತ್ತು) ಯೆಂದು ಅಥವಾ ಉರ್ದು ಭಾಷೆಯಲ್ಲಿ ಸಮಯವೆಂದರ್ಥವಿರುವುದರಿಂದ ನೌಬತ್ ಯೆಂದಾಗಲೀ ಹೆಸರನ್ನು ಪಡೆದಿರುತ್ತದೆ. ಪಟ್ಟಣಸ್ಥರಾದ ಜನರನ್ನೆಲ್ಲ ತನ್ನ ಮಂಗಳಧ್ವನಿಯಿಂದ ಎಚ್ಚರಿಸಿ—

**"ಉದ್ಯಂತಮಸ್ತಂ ಯಂತಮಾದಿತ್ಯಮಭಿಧ್ಯಾಯನ್ ಕುರ್ವನ್ ಬ್ರಾಹ್ಮಣೋ ವಿದ್ವಾನ್ ಸಕಲಂ ಭದ್ರಮಶ್ನುತೇ"**
**"ಉಪತಿಷ್ಠಂತಿ ವೈ ಸಂಧ್ಯಾಂ ಯೇ ನ ಪೂರ್ವಾಂ ನ ಪಶ್ಚಿಮಾಮ್ । ವ್ರಜಂತಿ ತೇ ದುರಾತ್ಮಾನಸ್ತಾಮಿಸ್ರಂ ನರಕಂ ನೃಪ! ॥"**

"ಉದಿಸುವ ಮತ್ತು ಅಸ್ತಂಗತನಾಗುವ ಸೂರ್ಯನನ್ನು (ಸೂರ್ಯಾಂತರ್ಗತ ನಾರಾಯಣನನ್ನು) ಧ್ಯಾನಿಸಿ, ಸೇವಿಸುವ ಜ್ಞಾನಿಯು ಸರ್ವಾಭೀಷ್ಟವನ್ನು ಹೊಂದುವನು. ತ್ರಿಕಾಲ ಸಂಧ್ಯಾವಂದನವನ್ನು ಮಾಡದ ದುರ್ಬುದ್ಧಿಗಳು ಸರ್ವಕರ್ಮ ಬಹಿಷ್ಕೃತರಾಗಿ ನರಕಕ್ಕೆ ಹೋಗುವರು." ಎಂಬೀ ಶ್ರುತಿಸ್ಮೃತಿಗಳಿಂದ ಅವಶ್ಯ ಕರ್ತವ್ಯವಾದ ಸಂಧ್ಯಾವಂದನಾದಿ ಕರ್ಮಗಳಿಗೆ ಯೋಗ್ಯ ಸಮಯವನ್ನು ಸರ್ವ ಸಜ್ಜನರಿಗೆ ಬೋಧಿಸುತ್ತದೆ. ತಕ್ಕ ಕಾಲಗಳಲ್ಲಿ ಎಲ್ಲರೂ ಸತ್ಕರ್ಮವನ್ನು ಆಚರಿಸುವುದಕ್ಕಾಗಿಯೇ ತ್ರಿಕಾಲ ನಗರೀಘೋಷವನ್ನು ಮಠಾಧಿಪತಿಗಳು ವ್ಯವಸ್ಥಾಪಿಸಿರುತ್ತಾರೆ. ಅದರಂತೆಯೇ ಕ್ಷೇತ್ರಸ್ಥರಾದ ಸದಾಚಾರಶೀಲರು ಈ ನಗಾರಿಯ ಶಬ್ದ ಕೇಳಿದ ಕೂಡಲೇ ಆಯಾಯ ಕಾಲದ ಸಂಧ್ಯಾದಿ ಕರ್ಮಗಳನ್ನಾಚರಿಸಲುಪಕ್ರಮಿಸುವ ಸಂಪ್ರದಾಯವೀಗಲೂ ಇದೆ. ಈ ಭೇರಿ ಶಬ್ದವು ವೈದಿಕ ಕರ್ಮೋಪಯುಕ್ತಮಾತ್ರವಲ್ಲದೆ ಅನೇಕ ಕಾಲೋಚಿತ ಲೌಕಿಕ ವ್ಯಾಪಾರಕ್ಕೂ ಎಚ್ಚರ ಕೊಡುತ್ತದೆ.

# ಶ್ರೀಕೃಷ್ಣನಿತ್ಯಪೂಜಾ.

**ಭೈಷ್ಮೀಕರಾಂಬುರುಹಪೂಜಿತಪಾದಪದ್ಮಂ ಶ್ರೀಚಕ್ರಚಿಹ್ನಪರಿಪೂಜಿತಸರ್ವಗಾತ್ರಮ್ । ಆನಂದತೀರ್ಥಕೃತಸೇವನತೃಪ್ತಚಿತ್ತಂ ಕೃಷ್ಣಂ ಸದಾ ನಮತ ಸೇವತ ಮೋಕ್ಷಕಾಮಾಃ ॥** ರೂ ಪಾ ಅ. ೧.

ರಾತ್ರಿಯ ಕಡೇಯಾಮದಲ್ಲಿ ಶಂಖಧ್ವನಿ ಭೇರಿ (ನಗಾರಿ) ತಾಡನ ಮಂಗಲವಾದ್ಯಗಳಾದ ಕೂಡಲೇ ಶ್ರೀಪಾದಂಗಳವರು ಮುಖಪ್ರಕ್ಷಾಳನಾದಿ ಶೌಚವಿಧಿಯನ್ನು ತೀರಿಸಿ, ಶ್ರೀಕೃಷ್ಣನಿಗೆ ನಮಸ್ಕರಿಸಲಿಕ್ಕೆ ಬರುವಾಗ ದ್ವಾರಪಾಲಕರು ಮಹಾಘಂಟೆಯನ್ನು ಬಾರಿಸುವರು. ತತ್ಕ್ಷಣವೇ ಹರಿದಾಸರು ಶ್ರೀಕೃಷ್ಣನನ್ನು ವಿಧವಿಧವಾಗಿ ತಾಳ ತಂಬೂರಿ ಹಿಡಿದುಕೊಂಡು ಗಾನಮಾಡುತ್ತಾರೆ. ವಾದ್ಯಘೋಷಗಳು ಆರಂಭವಾಗುತ್ತವೆ. ಯತೀಶ್ವರರು ಮಧ್ವಸರೋವರದಲ್ಲಿ ಸ್ನಾನಮಾಡಿ, ಊರ್ಧ್ವಪುಂಡ್ರಧಾರಣ ಮಾಡಿ, ಜಪತರ್ಪಣಾನಂತರ ಶ್ರೀಕೃಷ್ಣದೇವರಿಗೆ ಶಂಖಭ್ರಮಣವನ್ನಾಚರಿಸಿ, ನಿರ್ಮಾಲ್ಯವನ್ನು ವಿಸರ್ಜಿಸಿ, ಶುದ್ಧೋದಕವನ್ನಭಿಷೇಚಿಸಿ, ನೆನೆಕಡಲೆ ಹಾಲು ಮೊಸರು ಶುಂಠಿ ಅರಳುಂಡೆಗಳನ್ನು ಸಮರ್ಪಿಸಿ **ನಿರ್ಮಾಲ್ಯವಿಸರ್ಜನೆಪೂಜೆ**ಯನ್ನು ಮಾಡುವರು. ಅನಂತರ ಅಭಿಷೇಕಮಾಡಿ ನೈವೇದ್ಯವನ್ನರ್ಪಿಸಿ, **ಉಷಃಕಾಲಪೂಜೆ**ಯನ್ನು ಮಾಡುವರು. ಅನಂತರ ಪುರಾಣವನ್ನು ಕೇಳಿ ತುಪ್ಪ, ಹಾಲು, ಮೊಸರು, ಜೇನು, ಸಕ್ಕರೆ, ಫಲಾಭಿಷೇಕ ಮಾಡಿ, ಮಹಾನೈವೇದ್ಯವನ್ನು ನಿವೇದಿಸಿ **ಪಂಚಾಮೃತಪೂಜೆ**ಯನ್ನೂ, ಆ ಮೇಲೆ ಹೆಸರ ಹಿಟ್ಟು ಬಿಸಿ ನೀರುಗಳಿಂದ ಶ್ರೀಕೃಷ್ಣನನ್ನು ತೊಳೆದು ಕ್ಷೀರವನ್ನರ್ಪಿಸಿ **ಉದ್ವರ್ತನ (ಉದ್ವಾರ್ಚನ) ಪೂಜೆ**ಯನ್ನೂ, ಸರೋವರದಿಂದ ಶುದ್ಧೋದಕವನ್ನು ತಂದು ಸುವರ್ಣಕಲಶದಲ್ಲಿ ಪೂಜಿಸಿ, ಆ ಕಲಶೋದಕವನ್ನು ಅಭಿಷೇಕ ಮಾಡಿ, ಪಾಯಸ ಬೆಣ್ಣೆ ದೋಸೆ ನೈವೇದ್ಯಗಳನ್ನು ಅರ್ಪಿಸಿ **ತೀರ್ಥಪೂಜೆ**ಯನ್ನೂ, ಆ ಮೇಲೆ ಅನೇಕ ನವರತ್ನಾಭರಣಗಳಿಂದ ಜನರಿಗೆ

ವಿವಿಧ ಲೀಲೆಗಳ ಸ್ಮರಣೆಗಾಗಿ ಶ್ರೀಕೃಷ್ಣದೇವರನ್ನು ವಿವಿಧವಾಗಿ ಅಲಂಕರಿಸಿ, ಭಕ್ಷ್ಯಭೋಜ್ಯಾದಿ ಷಡ್ರಸಾನ್ನವನ್ನರ್ಪಿಸಿ, **ಅಲಂಕಾರಪೂಜೆ**ಯನ್ನೂ ಮಾಡಿ, ಜನರಿಗೆ ತೀರ್ಥಪೂಜಾ ಪ್ರಸಾದವನ್ನು ಭೋಜನಶಾಲೆಯಲ್ಲಿಯೂ, ಅಲಂಕಾರಪೂಜಾ ಪ್ರಸಾದವನ್ನು ಮೃಷ್ಟಾನ್ನಶಾಲೆಯಲ್ಲಿಯೂ ದಾನಮಾಡಿಸುವರು. ಅಲಂಕಾರಪೂಜಾ ನಂತರ **ಅವಸರ ಪೂಜೆ**ಯನ್ನೂ ಮಾಡುವರು. ಆ ಮೇಲೆ ಬ್ರಹ್ಮಸೂತ್ರ ವಿಷ್ಣುಸಹಸ್ರ ನಾಮ ಕೃಷ್ಣಾಷ್ಟೋತ್ತರ ಇತ್ಯಾದಿ ಸ್ತೋತ್ರಾವೃತ್ತಿಗಳಿಂದ ತುಲಸೀ ಪುಷ್ಪಾರ್ಚನೆಗಳನ್ನು ಮಾಡಿ, ವಿವಿಧ ಭಕ್ಷ್ಯಭೋಜ್ಯಾದಿ ಮಹಾನೈವೇದ್ಯಗಳನ್ನು ಸಾಕ್ಷಾತ್ ಶ್ರೀಮದಾಚಾರ್ಯರೇ ಅರ್ಪಿಸುವರೆಂದು ಭಾವಿಸಿ ಶ್ರೀಹರಿಯನ್ನು ಧ್ಯಾನಿಸಿ, ಹರಿದಾಸರು ಆರೋಗಣೆ ಗೀತವನ್ನು ಹಾಡಲು, ದ್ವಾದಶಸ್ತೋತ್ರದಿಂದ ತಾಳಧ್ವನಿಪೂರ್ವಕವಾಗಿ ನಾಮ ಸಂಕೀರ್ತನೆಯಾಗುತ್ತಿರಲು ನೈವೇದ್ಯವನ್ನು ಸಮರ್ಪಿಸಿ, ಅನೇಕ ಮಂಗಳಾರತಿಗಳಿಂದ **ಮಹಾಪೂಜೆ**ಯನ್ನು ಮಾಡುವರು. ಇದೇ ರೀತಿಯಿಂದ ಶ್ರೀಮುಖ್ಯಪ್ರಾಣದೇವರಿಗೂ ಶ್ರೀಕೃಷ್ಣದೇವರ ನೈವೇದ್ಯವನ್ನು ಅರ್ಪಿಸಿ, ಪೂಜೆಯನ್ನು ಮಾಡುವರು. ಈ ಪ್ರಕಾರ ಎಂಟು ಪೂಜೆಗಳು ಹಗಲಿನಲ್ಲಿ, **ರಾತ್ರಿಪೂಜೆ** ಕೂಡ ಒಂಭತ್ತು ಪೂಜೆಗಳನ್ನು ಮಾಡುವರು. ಈ ಮಧ್ಯೇ ಉಷಃಕಾಲಪೂಜಾನಂತರದಲ್ಲಿ ಸಾಕ್ಷಾತ್ಕಾಮಧೇನು ಸಮಾನವಾದ ಗೋವು ಬಂದು ನಿಲ್ಲಲು ಶ್ರೀಕೃಷ್ಣನಿಗೆ ಕಾಮಧೇನುವೇ ಅರ್ಚಿಸುವಳೆಂಬ ಬುದ್ಧಿಯಿಂದ ಅರಳಕ್ಕಿಗಳನ್ನರ್ಪಿಸಿ, ಮಂಗಳಾರತಿ ಮಾಡಿ, ಆ ಹರಿಪ್ರಸಾದವನ್ನು ಆ ಆಕಳಿಗಿಟ್ಟು, ಆ ಮಂಗಳಾರತಿಯನ್ನೇ ಮಾಡಿ, **ಗೋಪೂಜೆ**ಯನ್ನು ಮಾಡುವರು. ಉಷ್ಣಾರ್ಚನೆಯ ಮಧ್ಯದಲ್ಲಿ ಹಾಲುಬೆಣ್ಣೆ ಪೂಜೆಯನ್ನು ಮಾಡುವರು.

ಮಹಾಪೂಜಾನಂತರ ಶ್ರೀಮುಖ್ಯಪ್ರಾಣಗುಡಿಯಲ್ಲಿ **ಪ್ರಾಣ ಪೂಜೆ,** ಶ್ರೀಮಧ್ವಗುಡಿಯಲ್ಲಿ **ಶ್ರೀಮದಾಚಾರ್ಯರ ಪೂಜೆ,** ಸಿಂಹಾಸನದಲ್ಲಿ **ವ್ಯಾಸಪೂಜೆ** ಇವುಗಳನ್ನು ಮಾಡಿ, **ಶ್ರೀಕೃಷ್ಣನಿಗೆ** ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ, ಸರೋವರದಲ್ಲಿ ಗಂಗಾಪೂಜೆ

ದಂಡೋದಕಗಳನ್ನಾಚರಿಸಿ, **ಪೂರ್ವಾಚಾರ್ಯರ** ವೃಂದಾವನವನ್ನರ್ಚಿಸಿ, ಗುರುಪಾದಪೂಜೆಯನ್ನು ಮಾಡಿ, ಭಕ್ತರಿಗೆ ತೀರ್ಥ ಗಂಧ ದಕ್ಷಿಣಾದಿಗಳನ್ನು ಕೊಟ್ಟು, ಶ್ರೀಹರಿನಿವೇದಿತ ಭಕ್ಷ್ಯಭೋಜ್ಯಾದಿಗಳಿಂದ ಬ್ರಾಹ್ಮಣೋತ್ತಮರನ್ನು ಸತ್ಕರಿಸುವರು. ಭಿಕ್ಷಾನಂತರ ಶಿಷ್ಯರಿಗೆ ವೇದಾಂತಪಾಠೋಪದೇಶವನ್ನು ಮಾಡುವರು. ಸಾಯಂಕಾಲದಲ್ಲಿ ಪುನಃ ಸ್ನಾನಮಾಡಿ, ಅರಳುರಾಶಿಯನ್ನು ಸಮರ್ಪಿಸಿ, ಚಾಮರಗಳಿಂದ ಸೇವಿಸಿ ದಾಸರು ಗಾನಮಾಡಲು, ಸೇವಕರು ದೀವಿಟಿಗೆಯನ್ನು ಎರಡು ಪಾರ್ಶ್ವದಲ್ಲಿ ಹಿಡಿದಿರಲು, ವಿವಿಧಸೇವೆಯಾಗುತ್ತಿರಲು ಮಂಟಪದಲ್ಲಿ ಮಂಗಳಾರತಿ ಮಾಡಿ **ದೀವಿಟಿಗೆಸೇವೆ** ಮಾಡುವರು. ಪುನಃ ಸ್ನಾನಮಾಡಿ, ನೈವೇದ್ಯವನ್ನರ್ಪಿಸಿ, ನಾಮಸಂಕೀರ್ತನೆ ನರ್ತನೆ ಮಾಡಲು, **ರಾತ್ರಿಪೂಜೆಯನ್ನು** ಮಾಡುವರು. ತತ್‌ಕ್ಷಣವೇ ಪಾಲಕಿಯಲ್ಲಿ ಶ್ರೀದೇವನನ್ನು ಹೊರಗೆ ತಂದು ಮಂಟಪದಲ್ಲಿ ತೊಟ್ಟಿಲಿಲ್ಲಿಟ್ಟು, ಅಷ್ಟಾವಧಾನಸೇವೆಯನ್ನು ಮಾಡಿ, ಭಕ್ತರಿಗೆ ಮಂತ್ರಾಕ್ಷತೆಕೊಟ್ಟು, ಕೊಳಲುಸೇವಾನಂತರ ಏಕಾಂತದಲ್ಲಿ ಲಕ್ಷ್ಮೀಸಹಿತನಾಗಿ ಶ್ರೀಕೃಷ್ಣನು ಶಯನಗೃಹದಲ್ಲಿರುವನೆಂದು ಭಾವಿಸಿ, **ಏಕಾಂತಸೇವಾಪೂಜೆಯನ್ನು** ಮಾಡಿ, ಆ ದಿನದ ವಿಶೇಷಕರ್ಮವನ್ನು ಭಗವಂತನಲ್ಲಿ ಅರ್ಪಿಸಿ ರಾತ್ರಿ ಶ್ರೀಹರಿಧ್ಯಾನಪರರಾಗುವರು. ಈ ಪ್ರಕಾರ ಶ್ರೀಮದಾಚಾರ್ಯರ ಸಂಕಲ್ಪದಿಂದ ಈ ವರೆಗೂ ನಿರ್ವಿಘ್ನದಿಂದ ಏಕರೀತಿಯಾಗಿ ಶ್ರೀಕೃಷ್ಣ ಪೂಜಾಕ್ರಮವು ನಡಿಯುತ್ತಿದೆ.

---

## ವಿಶೇಷೋತ್ಸವಗಳು.

**ತತೋ ರಥಸ್ಥಿತಂ ದೇವಂ ಪೂಜಯೇದ್ಗರುಡಧ್ವಜಮ್।**
**ಕಾರ್ತಿಕಾಂತೇ ಚ ವಿಪ್ರೇಂದ್ರ ಮಕರೇ ಚ ವಿಶೇಷತಃ ॥**

**ರೂ. ಮಾ. ಅ. ೪**

ಉತ್ಥಾನದ್ವಾದಶಿಯಲ್ಲಿ ಶ್ರೀಹರಿಯು ಕ್ಷೀರಾಬ್ಧಿಯಿಂದ ಎಚ್ಚತ್ತನೆಂದು ಭಾವಿಸಿ, ಕ್ಷೀರಾಬ್ಧಿ ಉತ್ಸವವನ್ನು ಮಾಡಿ, ರಾತ್ರಿ ಶುಭವು

ಹೂರ್ತದಲ್ಲಿ ಕೃಷ್ಣನನ್ನು ಪಲ್ಲಕಿಯಲ್ಲಿಟ್ಟು ಮಧ್ವಸರೋವರದಲ್ಲಿ ತೆಪ್ಪದ ಮೇಲೆ ಕಟ್ಟಿದ ರಥದಲ್ಲಿ ಕೂಡಿಸಿ, ತೆಪ್ಪೋತ್ಸವ(ಕೆರೆ ಉತ್ಸವ)ವನ್ನು ಮಾಡಿ ಮಹಾ ವೈಭವದಿಂದ ಮಹಾರಥದಲ್ಲಿಟ್ಟು, ನಾಲ್ಕು ಬೀದಿಯ ಎರಡು ಪಾರ್ಶ್ವಗಳಲ್ಲಿಯೂ ಲಕ್ಷೋಪಲಕ್ಷ ದೀಪಗಳನ್ನು ಹಚ್ಚಿ, ಪೂರ್ಣಿಮಾ ಪರ್ಯಂತ ನಾಲ್ಕು ದಿನಗಳಲ್ಲಿ ಲಕ್ಷದೀಪೋತ್ಸವವನ್ನು ಮಾಡುವರು. ಆ ಮೇಲೆ ಪ್ರತಿ ದಿನವೂ ಪ್ರಾಯಶಃ ರಥೋತ್ಸವವು ನಡಿಯುತ್ತಾ ಇರುತ್ತದೆ.

ಧನುರ್ಮಾಸದಲ್ಲಿ ಉಷಃಕಾಲದಲ್ಲಿ ಶ್ರೀಕೃಷ್ಣನಿಗೆ ಮಹಾನೈವೇದ್ಯಗಳನ್ನರ್ಪಿಸಿ, ಬಹು ಮಂದಿ ಬ್ರಾಹ್ಮಣಸುವಾಸಿನೀ ಸಂತರ್ಪಣೆಯು ನಡಿಯುತ್ತದೆ. ಮಕರಸಂಕ್ರಮಣಕ್ಕೆ ಆರು ದಿವಸ ಮುಂಚಿತವಾಗಿ ವಾರ್ಷಿಕೋತ್ಸವವಾರಂಭವಾಗಿ ಸಂಕ್ರಮಣ ದಿನ ಇಪ್ಪತ್ತು ಸಾವಿರದ ಮೇಲೆ ಜನರು ಸೇರಲು ಮಹೋತ್ಸವವು ನೆರವೇರುತ್ತದೆ. ಮರುದಿನ ಚೂರ್ಣೋತ್ಸವವು ಮಧ್ಯಾಹ್ನದಲ್ಲಿ ಮಹಾವಿಜೃಂಭಣೆಯಿಂದ ಆದ ಮೇಲೆ ಸರೋವರದಲ್ಲಿ ಶ್ರೀಕೃಷ್ಣಸಮೇತರಾಗಿ ಶ್ರೀ ಮುನೀಶ್ವರರು ಮಹಾಜನರಿಂದ ಕೂಡಿ ಅವಭೃಥಸ್ನಾನಮಾಡುವರು. ಆ ದಿನ ಭೋಜನಕ್ಕೆ ಬ್ರಾಹ್ಮಣರು ಹನ್ನೆರಡು ಸಾವಿರಕ್ಕೆ ಕಡಿಮೆ ಇಲ್ಲದೆ ಕೂಡುವರು. ಈ ದಿನ ಅಶ್ವತ್ಥಾಮಾದಿಗಳೂ ಕೂಡ ಮಹಾಪಙ್ಕ್ತಿಪ್ರಸಾದ ಸ್ವೀಕಾರಾರ್ಥವಾಗಿ ಬರುತ್ತಾರೆಂಬ ಶಿಷ್ಟಪ್ರವಾದವಿರುವದರಿಂದ ಪರಾನ್ನನಿಯಮವನ್ನೂ ಈ ಪ್ರಸಾದಸ್ವೀಕಾರ ನಿಯಮದಲ್ಲಿ ಅನುಸರಿಸುವುದಿಲ್ಲ. ಮಾಘ ಶುದ್ಧ ನವಮಿಯಲ್ಲಿ ಮಧ್ವನವಮಿಯ ಉತ್ಸವವು. ಆ ದಿವಸ ಅನಂತೇಶ್ವರದೊಳಗಿನ ಮಧ್ವಗುಡಿಯಲ್ಲಿ ವಿಶೇಷವಾಗಿ ಶ್ರೀಪಾದಂಗಳವರು, ಸಮಸ್ತ ವೈದಿಕರೂ ಶ್ರೀಮದಾಚಾರ್ಯರ ಪೂಜೆಯನ್ನು ಮಾಡುವರು. ಪರ್ಯಾಯ ಶ್ರೀಪಾದಂಗಳವರು ಹತ್ತು ಹನ್ನೆರಡು ಸಾವಿರ ಜನರಿಗೆ ಸಮಾರಾಧನೆ ಮಾಡಿಸಿ ರಾತ್ರಿ ರಥೋತ್ಸವವನ್ನೂ ಮಾಡಿಸುವರು. ಚೈತ್ರ ಶುದ್ಧ ನವಮಿ ರಾಮನವಮಿ ಉತ್ಸವ, ವಸಂತ ಋತುವಿನಲ್ಲಿ ವಸಂತೋತ್ಸವ, ವಿಶೇಷತಃ ವೈಶಾಖ ಶುಕ್ಲಪಕ್ಷದಲ್ಲಿ

ರಥೋತ್ಸವ, ದ್ವಾದಶೀ ದಿನ ಮಹಾವಸಂತಾರಾಧನ, ಸಿಂಹಮಾಸದಲ್ಲಿ ಶ್ರೀಕೃಷ್ಣಾಷ್ಟಮಿ ಉತ್ಸವವು. ಈ ಕೃಷ್ಣಾಷ್ಟಮೀ ದಿನ ಸರ್ವರೂ ಉಪವಾಸಪರರಾಗಿ ಸ್ವಯೋಗ್ಯತಾನುಸಾರ ಭಾಗವತಾದಿ ಶ್ರೀಕೃಷ್ಣ ಚರಿತ್ರೆಗಳನ್ನು ಪಾರಾಯಣ ಮಾಡುತ್ತಾರೆ. ಅರ್ಧರಾತ್ರಿಯಲ್ಲಿ ಶ್ರೀಕೃಷ್ಣನನ್ನು ಶ್ರೀಪಾದಂಗಳವರು ಪೂಜಿಸಿ, ಅರ್ಘ್ಯದಾನ ಮಾಡಿ, ಗುರು ವೃಂದಾವನವನ್ನು ಸೇವಿಸಿ, ಭಕ್ತರಿಗೆ ಮಂತ್ರಾಕ್ಷತೆ ದಕ್ಷಿಣೆಗಳನ್ನು ಕೊಟ್ಟು, ಪ್ರಾತಃಕಾಲ ತನಕ ಶ್ರೀಕೃಷ್ಣನನ್ನು ಉಪವಾಸ ಜಾಗರಣೆಗಳಿಂದ ಧ್ಯಾನಿಸುತ್ತಿದ್ದು, ಮರುದಿನ ದ್ವಾದಶಿಯಂತೆ ಶೀಘ್ರವಾಗಿ ಶ್ರೀಕೃಷ್ಣಪೂಜೆಮಾಡಿ, ಭಿಕ್ಷೆ ಮಾಡಿದ ಮೇಲೆ ಮಧ್ಯಾಹ್ನ ಸಮಯ ಶ್ರೀಕೃಷ್ಣನ ಬಾಲಲೀಲೆಯ ಸ್ಮರಣೆಗಾಗಿ ಅನೇಕ ಜನರು ಅನೇಕಾಶ್ಚರ್ಯಕರಗಳಾದ ವೇಷಗಳಿಂದ ಜನರ ಮನಸ್ಸಂತೋಷಪಡಿಸುತ್ತಿರಲು, ಪೂರ್ವ ದಿವಸದಲ್ಲಿ ಸ್ಥಾಪಿಸಿದ ಮೃಣ್ಮಯವಾದ ಶ್ರೀಕೃಷ್ಣವಿಗ್ರಹವನ್ನು ರಥದಲ್ಲಿಟ್ಟು ಅನೇಕ ಮಣ್ಣಿನ ಮಡಿಕೆಗಳನ್ನು ಗೋಪವೇಷಧಾರಿಗಳಿಂದ ಒಡಿಸುತ್ತಾ ಮಹೋತ್ಸವವನ್ನು ಮಾಡಿಸಿ, ಅವಭೃಥಸ್ನಾನಮಾಡುವರು. ಆಶ್ವೀಜ ಶುದ್ಧದಲ್ಲಿ ರಥೋತ್ಸವ ವೇದವ್ಯಾಸೋತ್ಸವ ವಿಜಯ ದಶಮಿ ವಿಜಯಯಾತ್ರೆ (ಫೌಜು) ಮರುದಿವಸ ಏಕಾದಶಿಯಿಂದ ಪಕ್ಷಿ ಮಜಾಗರಪೂಜೆ ಉತ್ಥಾನದ್ವಾದಶೀ ಪರಿಯಂತ ವಿಶೇಷೋತ್ಸವಗಳು. ಇನ್ನೂ ವಿಶೇಷೋತ್ಸವಗಳು ಆಗಾಗ ನಡಿಯುತ್ತವೆ.

## ಪರ್ಯಾಯ.

**ಯತ್ಯಷ್ಟಕಸ್ಯ ಶ್ರೀಕೃಷ್ಣಸೇವಾಯಾಂ ಸ ಹಿ ವಾದಿರಾಟ್।**
**ಅಬ್ದದ್ವಿತಯಪರ್ಯಾಯಮೇಕೈಕಸ್ಯ ವ್ಯಧಾನ್ಮುದಾ ॥**

ಈ ಪರ್ಯಾಯೋತ್ಸವವು ಎರಡುವರ್ಷಕ್ಕೆ ಒಂದು ಸಾರಿ ನಡಿಯುವುದು. ಮಕರಸಂಕ್ರಮಣ ಚೂರ್ಣೋತ್ಸವವಾದ ಮೇಲೆ ಮೂರನೇ ದಿನದಲ್ಲಿ ಪರ್ಯಾಯೋತ್ಸವವು. ಈ ಸಮಾರಂಭದಲ್ಲಿ ಅಷ್ಟ

ಮಠಗಳನ್ನೂ, ವಿಶೇಷವಾಗಿ ಶ್ರೀಕೃಷ್ಣಮಠವನ್ನೂ, ಪರ್ಯಾಯ ಕೂಡುವ ಶ್ರೀಪಾದಂಗಳವರ ಮಠವನ್ನೂ ಅಲಂಕರಿಸುತ್ತಾರೆ. ಆ ಉತ್ಸವಕ್ಕೆ ಮುಂಚೆಯೇ ಇತರ ಮಠಗಳಲ್ಲಿ ಔತಣ ಪಾದಪ್ರಕ್ಷಾಳನಗಳು ರಾಜವಿಜೃಂಭಣೆಗಳಿಂದ ಪರ್ಯಾಯ ಶ್ರೀಗಳವರಿಗೆ ನಡಿಸಲ್ಪಡುವುವು. ಎಲ್ಲಿ ನೋಡಿದರೂ ಮಹಾವಾದ್ಯಘೋಷ, ಅನ್ನದಾನ, ಪರ್ಯಾಯ ಶ್ರೀಪಾದಂಗಳವರು ಪೂರ್ವಸಂಪ್ರದಾಯ ಪ್ರಕಾರ ಪೂರ್ವಾಲಯ ಪಶ್ಚಿಮಾಲಯ ಉತ್ತರಾಲಯ ದಕ್ಷಿಣಾಲಯ ಸದ್ಗೃಹಸ್ಥರಿಗೂ ಪೆರಂಪಳ್ಳಿ ಕಡೆಕಾರು ಸದ್ಗೃಹಸ್ಥರಿಗೂ ಆಮಂತ್ರಣ ಕೊಡುವದಕ್ಕೆ ಬಿರುದಾವಳಿಯಿಂದ ಪ್ರಯಾಣಮಾಡುವುದು, ಈ ಗದ್ದಲವನ್ನು ನೋಡುವದಕ್ಕೆ ಕಣ್ಣಿಗೆ ಸಮಯವೇ ದುರ್ಲಭವಾಗುತ್ತದೆ. ಚೂರ್ಣೋತ್ಸವದಿಂದ ಎರಡನೇ ದಿನ ಪರ್ಯಾಯ ಬಿಳುವವರ ಸಮಾರಾಧನಮಹೋತ್ಸವವು. ಇದರ ಮರುದಿನ ಪ್ರಾತಃಕಾಲ ಪರ್ಯಾಯ ಕೂಡುವವರು ದಂಡತೀರ್ಥದಲ್ಲಿ ಸ್ನಾನಮಾಡಿ, ಜೋಡುಕಟ್ಟೆ ಎಂಬ ಸ್ಥಳವನ್ನಲಂಕರಿಸಿದಾಗ, ಇತರ ಎಲ್ಲಾ ಶ್ರೀಪಾದಂಗಳವರು ಅಲ್ಲಿಗೆ ಪ್ರಯಾಣಮಾಡಿ, ರಾಜವಿಭವದಿಂದ ದಿವ್ಯ ದಂತದ ಪಲ್ಲಕಿಯಲ್ಲಿ ಪರ್ಯಾಯ ಕೂಡುವ ಶ್ರೀಪಾದಂಗಳವರನ್ನು ಕರೆತಂದಾಗ, ಪರ್ಯಾಯ ಕೂಡುವ ಶ್ರೀಪಾದಂಗಳವರು ಇತರ ಶ್ರೀಪಾದಂಗಳವರಿಂದ ಕೂಡಿಕೊಂಡು, ಶ್ರೀಕೃಷ್ಣನ ಮುಂದುಗಡೆ ಗೋಪುರದ ಕೆಳಭಾಗದಲ್ಲಿ ಶ್ರೀಕೃಷ್ಣಪ್ರಾರ್ಥನಾಪೂರ್ವಕ ನವಗ್ರಹದಾನಾದಿಗಳನ್ನು ಕೊಟ್ಟು, ಚಂದ್ರೇಶ್ವರಾನಂತೇಶ್ವರರ ದರ್ಶನಾನಂತರ, ಶುಭಮುಹೂರ್ತದಲ್ಲಿ ಶ್ರೀಕೃಷ್ಣಾಲಯ ಪ್ರವೇಶ ಮಾಡಿ, ಶ್ರೀಮಧ್ವಾಚಾರ್ಯದತ್ತ ಪ್ರತಿಮೆಯನ್ನು ಶ್ರೀಕೃಷ್ಣನ ಮುಂದೆ ಇಟ್ಟು ಮಂಗಳಾರತಿ ಮಾಡಿ, ಪ್ರಾಣೇಶನನ್ನು ಅರ್ಚಿಸಿದ ಕೂಡಲೇ ಪೂರ್ವ ಪರ್ಯಾಯಸ್ಥರಾದ ಶ್ರೀಪಾದಂಗಳವರು ಪರ್ಯಾಯಸ್ಥರಾಗುವ ಶ್ರೀಪಾದಂಗಳವರಿಗೆ ಪಾದಪ್ರಕ್ಷಾಳನೆ ಮಾಡಲು, ಅಲ್ಲಿಂದ ಅಲಂಕೃತವಾದ ಬಡಗಮಾಳಿಗೆಯನ್ನು ಪ್ರವೇಶಿಸಿ, ವಿಶಾಲವಾದ ಮಂಟಪವನ್ನು ಅಲಂಕರಿಸಲು, ಸಮಸ್ತ ಶ್ರೀಪಾದಂಗಳವರು

ಹಾಗೆಯೇ ಇತರ ಸದ್ಗೃಹಸ್ಥರು ಪಟ್ಟಕಾಣಿಕೆ ಮಾಡುವರು. ಪರ್ಯಾಯಶ್ರೀಗಳವರು ಸೆರೆದವರಿಗೆ ಫಲಮಂತ್ರಾಕ್ಷತೆ ಕೊಟ್ಟು ಶ್ರೀಕೃಷ್ಣಸೇವೆಗೆ ತಕ್ಕಂತೆ ಹೊಸ ಜನರನ್ನು ನೇಮಿಸಿ, ಶ್ರೀಕೃಷ್ಣದೇವಾಲಯವನ್ನು ಪ್ರವೇಶಿಸಿ, ಪರ್ಯಾಯದಿಂದೇಳುವ ಶ್ರೀಗಳವರಿಗೆ ಪಾದಪ್ರಕ್ಷಾಳನ ಮಾಡಿ, ಶ್ರೀಮದಾಚಾರ್ಯರ ಸನ್ನಿಧಿಯಲ್ಲಿ ಆ ಮಠದ ದೇವರನ್ನು ಪಾಲಕಿಯಲ್ಲಿಟ್ಟು, ಪೂರ್ವಪರ್ಯಾಯಸ್ಥರಾದ ಶ್ರೀಪಾದಂಗಳವರನ್ನು ಮಠಕ್ಕೆ ಮಹಾಬಿರುದುಗಳಿಂದ ಕಳುಹಿಸಿ, ಆ ದಿವಸ ಶ್ರೀಕೃಷ್ಣಪೂಜೆ ಮಾಡಿ, ಎಲ್ಲಾ ಶ್ರೀಪಾದಂಗಳವರನ್ನು ಭಿಕ್ಷಾದಾನದಿಂದರ್ಚಿಸಿ, ಅನ್ನದಾನ ಮಾಡಿ ರಾತ್ರಿ ಮಹೋತ್ಸವವನ್ನು ಮಾಡುವರು. ಈ ಸಮಯ ಅನೇಕ ಸಹಸ್ರ ಜನರು ಸೇರುವರು. ಇದರ ವಿಷಯವನ್ನು ಕಣ್ಣಾರೆ ನೋಡಬೇಕಲ್ಲದೆ ಬಣ್ಣಿಸಲಳವಲ್ಲ.

---

# ಮುದ್ರಾಧಾರಣ.

**ಪ್ರತಪ್ತಂ ವಿಧಿನಾ ವಹ್ನೌ ಸಹಸ್ರಾರಂ ಸುವರ್ಣಕಮ್ ।**
**ಪ್ರಣತಾಯ ಪ್ರಶಿಷ್ಯಾಯ ಹಂಸೋ ಗುರುರಥಾಂಕಯೇತ್ ॥**

**ಸ್ಮೃತಿಮುಕ್ತಾವಳೀ. ಶ್ಲೋ. ಪ್ರ.**

ಉಡುಪಿಯಲ್ಲಿ ತಪ್ತಮುದ್ರಾಧಾರಣವು ಆಷಾಢ ಶುದ್ಧ ಶಯನೀ ಏಕಾದಶಿಯಲ್ಲಿ ಪ್ರತಿವರ್ಷವೂ ನಡಿಯುತ್ತದೆ. ಆ ದಿವಸ ಅನೇಕ ಮಾಧ್ವರು ಸೇರುತ್ತಾರೆ. ಮಹಾಪೂಜಾನಂತರ ಸುದರ್ಶನಹೋಮ ಮಾಡಿಸಿ, ಆಶ್ರಮಜ್ಯೇಷ್ಠರಾದ ಶ್ರೀಪಾದಂಗಳವರು ಇತರ ಶ್ರೀಪಾದಂಗಳವರಿಗೆ ಮುದ್ರಾಚಿಹ್ನಗಳನ್ನು ಮಾಡುತ್ತಾರೆ. ಆ ಮೇಲೆ ಎಲ್ಲಾ ಶ್ರೀಪಾದಂಗಳವರು ಜನರಿಗೆ ಶಂಖಚಕ್ರಗಳನ್ನು ಧಾರಣೆಮಾಡಿಸುವರು.

## ಉಡುಪಿ ದೇವಾಲಯಗಳು.

**ಗೃಹೈರಿವ ದಿಗೀಶಾನಾಮಷ್ಟಯೋಗಿಮಠೈರ್ವೃತಾಃ ।**
**ಮೇರುಶೃಂಗನಿಭಾಶ್ಚಂದ್ರಾನಂತೇಶಯದುಪಾಲಯಾಃ ॥**

ಪೂರ್ವಭಾಗದಲ್ಲಿ ಚಂದ್ರೇಶ್ವರ, ಅದರ ಪಶ್ಚಿಮದಲ್ಲಿ ಅನಂತೇಶ್ವರ ಈ ದೇವಾಲಯಗಳ ಸುತ್ತಲೂ ನಾಲ್ಕುಬೀದಿ, ಅದರ ಸುತ್ತಲೂ ಅಷ್ಟ ಮಠಗಳು, ಅಲ್ಲಿ ಉತ್ತರಭಾಗದಲ್ಲಿ ಶ್ರೀಕೃಷ್ಣದೇವಾಲಯ, ಅದರ ಒಳಗೆ ವಾಯವ್ಯದಲ್ಲಿ ಶ್ರೀಮುಖ್ಯಪ್ರಾಣಗುಡಿ, ನೈಋತ್ಯದಲ್ಲಿ ಗರುಡಗುಡಿ, ಈಶಾನ್ಯದಲ್ಲಿ ಸಿಂಹಾಸನ, ವ್ಯಾಸಗುಡಿ, ದ್ವಾರದ ಬಳಿ ಮಧ್ವಗುಡಿ ಸಹ ಇರುತ್ತವೆ. ಶ್ರೀಕೃಷ್ಣಮಠದ ಎದುರಿಗಿರುವ ಕನಕನಗುಡಿಗೆ ಎದುರಾಗಿ ಸರ್ವದಾ ಶ್ರೀಕೃಷ್ಣದರ್ಶನಕ್ಕೆ ಅನುಕೂಲವಾದ ಕನಕನ ಕಿಟಿಕಿಯು ಇದೆ.

## ಶ್ರೀಕೃಷ್ಣದೇವಾಲಯ.

**ಹನೂಮತಾ ಖಗೇಶೇನ ಶ್ರೀಮಧ್ವಗುರುಣಾ ತಥಾ ।**
**ಪುರಃ ಪಾರ್ಶ್ವೇಽಲಂಕೃತಂ ಶ್ರೀಕೃಷ್ಣಾಗಾರಂ ವಿರಾಜತೇ ॥**

ಶ್ರೀಕೃಷ್ಣನ ಗರ್ಭಗುಡಿಯ ಉತ್ತರ ಕೊಠಡಿಯಲ್ಲಿ ಶ್ರೀಪಾದಂಗಳವರು ತರ್ಪಣ ಮಾಡುವ ಸ್ಥಳ, ಮತ್ತು ಶ್ರೀಕೃಷ್ಣನ ಏಕಾಂತಪೂಜಾಸ್ಥಳವು. ಅಲ್ಲಿ ಉತ್ತರಮುಖ ಎರಡು ಬಾಗಿಲುಗಳು. ಮತ್ತೊಂದು ಗರ್ಭಗುಡಿಗೆ ಪೂರ್ವ ದ್ವಾರವಿದೆ. ಹೊಸ ಕದ್ರುಕಟ್ಟುವ ದಿನ ಆ ಬಾಗಿಲು ತೆರೆದು ಒಳಗೆ ಕದ್ರುಗಳನ್ನು ತಂದು ಪೂಜಿಸಿ ಕಟ್ಟುತ್ತಾರೆ. ಗರ್ಭಗುಡಿಯ ಹೊರಗಿನ ಉತ್ತರ ಬಾಗಿಲಿನ ಬದಿಯಲ್ಲಿ ಶ್ರೀಮಧ್ವಾಚಾರ್ಯರು ಭಕ್ತರು ತಂದ ಫಲವಸ್ತುಗಳನ್ನು ಶ್ರೀಕೃಷ್ಣನಿಗೆ ಸಮರ್ಪಿಸುತ್ತಾರೆ. ಹೊರಸುತ್ತಿನಲ್ಲಿ ಪೂರ್ವಭಾಗದಲ್ಲಿ ಅನುಯಾಗಶಾಲೆ, ದಕ್ಷಿಣಭಾಗದಲ್ಲಿ ಆಭರಣಶಾಲೆ, ಅದರ ಪಶ್ಚಿಮ ಸೂರ್ಯಶಾಲೆ, ನೈಋತ್ಯ

ದಲ್ಲಿ ಗರುಡದೇವರು, ಪಶ್ಚಿಮದಲ್ಲಿ ಚಂದ್ರಶಾಲೆ, ವಾಯವ್ಯದಲ್ಲಿ ಹನುಮಂತದೇವರು, ಉತ್ತರದಲ್ಲಿ ಮಡಿನೈವೇದ್ಯಶಾಲೆ, ಐಶಾನ್ಯದಲ್ಲಿ ಸಿಂಹಾಸನವು. ಆ ಸಿಂಹಾಸನದ ಒಳ ಕೊರಡಿಯಲ್ಲಿ ವ್ಯಾಸದೇವರು. ಹೊರ ಕೊಠಡಿಯಲ್ಲಿ ಶ್ರೀಮಧ್ವಾಚಾರ್ಯರ ಸಿಂಹಾಸನವಿದೆ. ಆ ಸಿಂಹಾಸನದಲ್ಲಿ ಪರ್ಯಾಯ ಶ್ರೀಪಾದಂಗಳವರು ಮಾತ್ರವೇ ಕುಳಿತು ತರ್ಪಣ ಮಾಡುವರು. ಭಕ್ತರಿಗೆ ತೀರ್ಥಪ್ರಸಾದಗಳನ್ನು ಕೊಟ್ಟು ಅನುಗ್ರಹಿಸುವರು. ಈ ಸಿಂಹಾಸನದಲ್ಲಿ ಆಚಾರ್ಯರ ಸನ್ನಿಧಾನವು ನಿತ್ಯದಲ್ಲಿರುವುದರಿಂದ ಆ ಸ್ಥಳಕ್ಕೆ ಸಿಂಹಾಸನವೆಂದು ಹೆಸರು ಬಂದಿದೆ. ಆ ಸಿಂಹಾಸನದ ಹೊರಗಡೆ ಉತ್ತರಕ್ಕೆ ಚತುಶ್ಶಾಲೆಯು, ಪ್ರಕೃತದಲ್ಲಿ ಈ ಚತುಶ್ಶಾಲೆಯನ್ನು ಅದಮಾರು ಮಠದ ವಿಬುಧಪ್ರಿಯತೀರ್ಥರೂ ಕೃಷ್ಣಾಪುರ ಮಠದ ವಿದ್ಯಾಪೂರ್ಣತೀರ್ಥರೂ ಅಂದವಾಗಿ ಘಟ್ಟಿಯಾಗಿ ಜೀರ್ಣೋದ್ಧಾರಮಾಡಿಸಿದರು. ಇದರ ಪಾರ್ಶ್ವದಲ್ಲಿ ಪಾಕಶಾಲೆಯು. ಈ ಚತುಶ್ಶಾಲೆಯಲ್ಲಿ ಶ್ರೀಗಳವರ ಪಙ್ಕ್ತಿಭೋಜನ ನಡಿಯುವುದು. ಇದರ ಪೂರ್ವದಲ್ಲಿ ಭೋಜನಶಾಲೆಯು ಇದನ್ನು ಶೀರೂರು ಮಠದ ಲಕ್ಷ್ಮೀಸಮುದ್ರತೀರ್ಥರು ಜೀರ್ಣೋದ್ಧಾರಮಾಡಿಸಿದರು. ಇದರ ಉತ್ತರಕ್ಕೆ ವಸಂತಮಹಲ್, ಅದರ ಪಶ್ಚಿಮದಲ್ಲಿ ಬಡಗಮಾಳಿಗೆ ಎಂಬ ಆಸ್ಥಾನಮಂಟಪವು. ವಸಂತಮಹಲಿನ ಉತ್ತರದಲ್ಲಿ ವೃಂದಾವನಗಳು. ಅದರ ಉತ್ತರದಲ್ಲಿ ರಾಜಾಂಗಣವು. ವಸಂತಮಹಲಿನ ಪೂರ್ವದಲ್ಲಿ ಗೋಶಾಲೆ ಕೂಡ ಇರುತ್ತವೆ.

---

## ಮಧ್ವಸರೋವರ.

**ನಾಗಾಸನಾಜ್ಞಯಾ ಯಸ್ಮಿನ್ ದೇವೀಭಾಗೀರಥೀ ಸ್ವಯಮ್ । ನಿತ್ಯಂ ಸನ್ನಿಹಿತಾ ಬ್ರಹ್ಮನ್ ಸರ್ವತೀರ್ಥನಿಷೇವಿತಾ ॥**

ರೂ. ಮಾ. ಅ. ೩.

ಈ ಸರೋವರದಲ್ಲಿ ಶ್ರೀಮದನಂತಾಸನಾಜ್ಞೆಯಿಂದ ಗಂಗೆಯು ಸನ್ನಿಹಿತಳಾಗಿದ್ದಾಳೆ. ನಿತ್ಯದಲ್ಲಿಯೂ ಶ್ರೀಕೃಷ್ಣಾಭಿಷಿಕ್ತತೀರ್ಥಶೇಷ ಸಂಬಂಧದಿಂದ ಅತಿ ಪವಿತ್ರವಾದುದು. ಗೋದಾವರೀ, ಕೃಷ್ಣವೇಣೀ, ಯಮುನಾ, ಸರಸ್ವತೀ, ಸರಯೂ, ಕಾವೇರೀ, ಭೀಮರಥೀ ಮೊದಲಾದ ಸಮಸ್ತ ನದಿಗಳೂ, ಸನ್ನಿಹಿತಗಳಾಗಿವೆ. ಇದರ ತೀರದಲ್ಲಿ ಅಯೋಧ್ಯಾ, ಕಾಶೀ, ಕುರು, ಮಥುರಾ, ದ್ವಾರಾವತೀ ಮೊದಲಾದ ಪುಣ್ಯಕ್ಷೇತ್ರಗಳೂ ಸದಾ ಆವಾಸಿಸುತ್ತವೆ. ಮಕರರಾಶಿಯನ್ನು ಸೂರ್ಯನು ಅಲಂಕರಿಸಿದಾಗ ಇಲ್ಲಿ ಸ್ನಾನವು ಬಹು ವಿಶೇಷ ಪುಣ್ಯಪ್ರದವು. ಇಲ್ಲಿ ಕಾರ್ತಿಕಾದಿ ಮಾಸಗಳಲ್ಲಿ ಸ್ನಾನವು ವಿಶೇಷವು. ಇದರ ಮಹಿಮೆಯನ್ನು ಶೇಷನು ಕೂಡ ಹೇಳಲಸಮರ್ಥನು.

**ತದಾಜ್ಞಯೋಪಾಗತಜಾಹ್ನವೀಜಲೇ ಜನೋಽತ್ರ ಸಸ್ನೌ ಸಹ ಪೂರ್ಣಬುದ್ಧಿನಾ । ತತಃ ಪರಂ ದ್ವಾದಶವತ್ಸರಾಂತರೇ ಸದಾವ್ರಜೇತ್ಸಾ ತದನುಗ್ರಹಾಂಕಿನೀ ॥**

ಎಂದು ಮಧ್ವವಿಜಯದಲ್ಲಿ ಹೇಳಿದಂತೆ ಶ್ರೀಮದಾಚಾರ್ಯರು ಗಂಗಾಯಾತ್ರೆಗೆ ಹೊರಟಾಗ ಅವರ ಗುರುಗಳು ಅನಂತಾಸನದೇವರನ್ನು ಪ್ರಾರ್ಥಿಸಲು, ಆತನಾಜ್ಞೆಯಿಂದ ಮೂರನೇ ದಿನದಲ್ಲೇ ಶ್ರೀಮಧ್ವಸರೋವರದಲ್ಲಿ ಗಂಗೆಯು ಪ್ರತ್ಯಕ್ಷಳಾದಳು. ಶ್ರೀಮದಾಚಾರ್ಯರು ಭಕ್ತರಿಂದೊಡಗೂಡಿ ಸ್ನಾನಮಾಡಿದರು. ಅಂದಿನಿಂದ ೧೨ ವರ್ಷಕ್ಕೊಮ್ಮೆ ಈ ಸರೋವರಕ್ಕೆ ಗಂಗೆಯು ಬರುತ್ತಾಳೆ. ಈ ಸಂಭ್ರಮವನ್ನು ಪೂರ್ವಪುರುಷರು ಕಣ್ಣಾರೆ ನೋಡಿದ್ದಾರೆಂದು ಐತಿಹ್ಯವಿದೆ. ಹಾಗೆ ಗಂಗೆಯು ಬರುವುದು ನಿಶ್ಚಯವಾಗಿದ್ದರೂ ಮೊದಲೇ ಕೆಲವು ವೇಳೆ ನೀರು ಕದಡಿಹೋಗಿರುವುದರಿಂದಲೂ, ಅಜಾಗ್ರತೆಯಿಂದ ಜನರ ತಿಳುವಳಿಕೆಗೆ ಬಾರದೆಯೂ ಆ ಗಂಗಾಗಮನವು ಅಗೋಚರವಾಗಬಹುದು. ಆದರೂ ಶ್ರೀ ಶೀರೂರು ಮಠದ ಈಗಿನ ಶ್ರೀ ಲಕ್ಷ್ಮೀಂದ್ರತೀರ್ಥರ ಪರಮ ಗುರುಗಳಾದ ಶ್ರೀಲಕ್ಷ್ಮೀವಲ್ಲಭತೀರ್ಥರ ಪರ್ಯಾಯದಲ್ಲಿ

ಕಳದ ಕ್ಷಯ ಸಂ।ರದ ಆಶ್ವೀಜ ಶು. ೧೩ಯು ಮಂಗಳವಾರ ದಿನದಲ್ಲಿ ನೈಋತ್ಯಭಾಗದಲ್ಲಿ ಈ ಸರೋವರವನ್ನು ಗಂಗೆಯು ಅಲಂಕರಿಸಿದ್ದಳು. ಆಗ ದಿನತ್ರಯದಲ್ಲಿ ತ್ರಿಕಾಲಪೂಜೆಯನ್ನೂ, ನಾಲ್ಕನೇ ದಿನ ಶುಕ್ರವಾರ ಬಂದುದರಿಂದ ಅಂದೂ ಗಂಗಾಪೂಜೆ ಮಾಡಿದ್ದರೆಂದು ವೃದ್ಧರು ಹೇಳು ತ್ತಾರೆ. ಅದರಂತೆ ಈಗಲೂ ಅದಮಾರು ಮಠಾಧೀಶರಾದ ಶ್ರೀ ವಿಬುಧ ಪ್ರಿಯತೀರ್ಥಶ್ರೀಗಳವರ ಪರ್ಯಾಯ ಸಮಯವಾದ ಶಾಲಿ. ಶಕ. ೧೮೪೬ನೇ ರಕ್ತಾಕ್ಷಿ ಸಂ।ರದ ಆಷಾಢ ಶು. ೬ಯು ಮಂಗಳವಾರ ಉತ್ತರಾ ನಕ್ಷತ್ರ ಮಿಥುನಲಗ್ನ ಪ್ರಾತಃಕಾಲದಲ್ಲಿ ಚಂದ್ರನು ಕನ್ಯಾ ರಾಶಿಯಲ್ಲಿರುವಾಗ ಸೌಭಾಗ್ಯಯೋಗದಲ್ಲಿ ಶ್ರೀಮಧ್ವಸರೋವರದ ನೈಋತ್ಯಕೋಣದಲ್ಲೇ ಪ್ರತ್ಯಕ್ಷಳಾಗಿದ್ದಾಳೆ. ಅಕಸ್ಮಾತ್ ನೀರಿನ ನಡುವೆ ಬಿಳಿದಾದ ಪ್ರವಾಹವು ಮೇಲ್ಮುಖವಾಗಿ ಬರುತ್ತಿದ್ದುದನ್ನು ಶ್ರೀಗಳವರೂ, ಅನೇಕ ವೃದ್ಧರಾದ ಮಹನೀಯರೂ, ಕಂಡು ಶ್ರೀ ಗಂಗಾ ದೇವಿಯೇ ಅನುಗ್ರಹಿಸಿದ್ದಾಳೆಂದು ನಿರ್ಣಯಿಸಿದರು. ಶ್ರೀಗಳವರು ಕೂಡಲೇ ಪೂಜಿಸಿದೊಡನೆ ಎಲ್ಲರೂ ಸ್ನಾನಮಾಡಿದರು. ದಿನತ್ರಯದಲ್ಲಿ ತ್ರಿಕಾಲಪೂಜೆಯೂ, ರಾತ್ರಿ ದೀಪಾರಾಧನೆಯೂ, ಶ್ರೀಗಳವರಿಂದ ಬಹು ವಿಭವಪುರಸ್ಸರವಾಗಿ ನಡೆಸಲ್ಪಟ್ಟಿತು. ಏಳೆಂಟು ಸಹಸ್ರ ಜನರು ಸಾಯಂಕಾಲ ತನಕ ಸ್ನಾನಮಾಡುತ್ತಿದ್ದರು. ನಿಷ್ಕಾರಣವಾಗಿ ಹಾಲಿ ನಂತಿರುವ ಆ ಪ್ರವಾಹವನ್ನು ನೋಡಿ ಸರ್ವಜನರೂ ದೃಢಭಕ್ತಿಯಿಂದ ಗಂಗೆಯನ್ನು ಸೇವಿಸಿದರು. ನಾಲ್ಕನೇ ದಿನ ಶುಕ್ರವಾರವಾದುದರಿಂದ ಅಂದೂ ಪೂಜಿಸಿದರು ಗಂಗಾಸನ್ನಿಧಾನದಿಂದ ಪವಿತ್ರವಾದ ಈ ತೀರ್ಥ ದಲ್ಲಿ ಪ್ರತಿದಿನವೂ ಗಂಗಾಪೂಜೆಯನ್ನು ಎಲ್ಲಾ ಶ್ರೀಗಳವರೂ ನಡಿಸು ವುದು ಪದ್ಧತಿಯಾಗಿಯೇ ಬಂದಿದೆ. ಶ್ರೀ ಪರ್ಯಾಯಸ್ಥ ಶ್ರೀ ವಿಬುಧ ಪ್ರಿಯತೀರ್ಥ ಶ್ರೀಗಳವರು ನಿತ್ಯಪೂಜೆಗೆ ಅನುಕೂಲವಾಗುವಂತೆ ಕೆರೆಯ ನೈಋತ್ಯ ಗಂಗಾ ಪ್ರತ್ಯಕ್ಷ ಸ್ಥಳದಲ್ಲಿ ಗಂಗಾಪ್ರತಿಮೆಯನ್ನು ಪ್ರತಿಷ್ಠೆ ಮಾಡಿದ್ದಾರೆ. ಇಲ್ಲಿ ನಿತ್ಯ ಗಂಗಾಪೂಜಾ ಕುಂಕುಮಾರ್ಚನೆ ಮೊದ ಲಾದ ಸೇವೆ ನಡಿಯುತ್ತದೆ. ಈ ಸರೋವರವು ಕೃಷ್ಣದೇವಾಲಯದ ಪೂರ್ವಭಾಗದಲ್ಲಿದೆ.

# ಉಡುಪಿ ಯಾತ್ರಾಕ್ರಮು.

**ನಮಸ್ಕೃತ್ಯ ಚ ಭೂತೇಶಂ ಪುಂಡರೀಕಾಕ್ಷಮೇವ ಚ ।**
**ಪ್ರಣಮ್ಯ ಪರಯಾ ಭಕ್ತ್ಯಾ ವೈನತೇಯಸಮನ್ವಿತಮ್ ॥**
**ದ್ವಾರಮಾಗತ್ಯ ಚ ಪುನಃ ಸಾಷ್ಟಾಂಗಂ ಪ್ರಣಮೇತ್ಸುಧೀಃ ।**

ರೂ. ಮಾ. ಅ. ೨.

ಯಾತ್ರಿಕರು ಶ್ರೀಕೃಷ್ಣನಾಮುಗಳನ್ನು ಘಟ್ಟಿಯಾಗಿ ಉಚ್ಚರಿಸಿ ಕೊಂಡು, ಗೋಪುರದ್ವಾರದಲ್ಲಿ ಫಲ ತಾಂಬೂಲ ದಕ್ಷಿಣಾದಿಗಳನ್ನಿಟ್ಟು, ಸಾಷ್ಟಾಂಗ ಪ್ರಣಾಮುಗಳನ್ನು ಮಾಡಿ, ಧೂಳೀದರ್ಶನವನ್ನು ಮಾಡಿ ಕೊಂಡು, ಚಂದ್ರೇಶ್ವರ ಅನಂತೇಶ್ವರ ದರ್ಶನಮಾಡಿ ಪಾದಪ್ರಕ್ಷಾಲನ ಮಾಡಿ, ಧ್ವಜಸ್ಥ ಗರುಡನನ್ನು ವಂದಿಸಿ, ಶ್ರೀಕೃಷ್ಣದರ್ಶನಮಾಡಿ, ಶ್ರೀಹರಿ, ಪ್ರಾಣ, ಮಧ್ವ, ವ್ಯಾಸಮೂರ್ತಿಗಳನ್ನು ವಂದಿಸಿ, ಶ್ರೀಕೃಷ್ಣಾರ್ಚಕ ಬಾಲಯತಿಗಳನ್ನು ನಮಿಸಿ, ಆಜ್ಞೆಯನ್ನು ಪಡೆದು, ಪಾಪಾನುವಾದಪೂರ್ವಕ ಪ್ರಾಯಶ್ಚಿತ್ತಗಳನ್ನು ಮಾಡಿಕೊಂಡು, ಮಹಾಸಂಕಲ್ಪದಿಂದ ಮಧ್ವಸರೋವರದಲ್ಲಿ ಸ್ನಾನಮಾಡಿ, ಕ್ಷೇತ್ರೋಪವಾಸಪೂರ್ವಕ ಶ್ರೀಕೃಷ್ಣನನ್ನು ಸೇವಿಸುತ್ತಾ ಪ್ರಥಮ ದಿನವನ್ನು ಕಳೆಯಬೇಕು. ಎರಡನೆಯ ದಿನ ಕ್ಷೇತ್ರಶ್ರಾದ್ಧವನ್ನು ಮಾಡಿ, ಯಥಾನುಕೂಲ ಬ್ರಾಹ್ಮಣಭೋಜನವನ್ನು ಮಾಡಿಸಿ, ಪಿತೃಗಳನ್ನು ತೃಪ್ತಿಪಡಿಸಬೇಕು. ಈ ರೀತಿಯಿಂದ ಆತ್ಮಕಾರ್ಯ ಪಿತೃಕಾರ್ಯಗಳನ್ನು ಮುಗಿಸಿಕೊಂಡು ಪರಿಶುದ್ಧಾಂತಃಕರಣನಾಗಿ ಶಕ್ತ್ಯನುಸಾರವಾಗಿ ನಿರ್ವಂಚನೆಯಿಂದ ಶ್ರೀಕೃಷ್ಣಸೇವೆಯನ್ನು ಮಾಡಿ, ಪ್ರಸಾದಸ್ವೀಕಾರವನ್ನು ಮಾಡತಕ್ಕದ್ದು. ಅಂತಹ ಸೇವಕರ ಬಾಲ್ಯ ಕೌಮಾರ ವಾರ್ಧಕ್ಯಗಳಲ್ಲಿ ಶತಜನ್ಮಗಳಲ್ಲಿ ಮಾಡಿದ ಪಾಪಗಳೆಲ್ಲವೂ ಭಸ್ಮವಾಗುತ್ತವೆ. ಅದರ ಮೇಲೆ ಗುರುಗಳಾಜ್ಞೆಯನ್ನು ಪಡೆದು, ಸಮೀಪದಲ್ಲಿರುವ ತೀರ್ಥಕ್ಷೇತ್ರಗಳನ್ನು ಸೇವಿಸಿ, ಪಾಜಕಕ್ಷೇತ್ರ, ದುರ್ಗಾಬೆಟ್ಟ, ದಂಡತೀರ್ಥಗಳಿಗೆ ಪ್ರಯಾಣ ಮಾಡಿ, ಸಮುದ್ರಸ್ನಾನ ಮಾಡಿಕೊಂಡು, ಪುನಃ ಕೃಷ್ಣಾರಾಧಕ ಯತಿ

ಗಳಿಂದ ಫಲಮಂತ್ರಾಕ್ಷತೆಗಳನ್ನು ಹೊಂದಿ, ಶ್ರೀಕೃಷ್ಣದಿವ್ಯಮೂರ್ತಿಯನ್ನು ಧ್ಯಾನಿಸುತ್ತಾ ಸ್ವದೇಶಕ್ಕೆ ಪ್ರಯಾಣಮಾಡಬೇಕು.

## ಯಾತ್ರಾಫಲ.

**ಯಾವತ್ಪದಾನಿ ಕೃಷ್ಣಸ್ಯ ಮಾರ್ಗಗೋ ಯಾತಿ ಮಾನವಃ।**
**ಪದೇ ಪದೇಽಶ್ವಮೇಧಸ್ಯ ಯಜ್ಞಸ್ಯ ಲಭತೇ ಫಲಮ್ ॥**

ರೂ. ಮಾ. ಅ. ೨

ಶ್ರೀಕೃಷ್ಣಯಾತ್ರಿಕರು ನಿಷ್ಕಪಟ ಭಕ್ತಿಯಿಂದ ಕೃಷ್ಣಪಾದವನ್ನೇ ಸ್ಮರಿಸಿ, ನಿತ್ಯಕರ್ಮಗಳನ್ನು ತೀರಿಸಿ, ವಿಷ್ಣುಸಹಸ್ರನಾಮ ಕೃಷ್ಣಾಷ್ಟೋತ್ತರ ಮಾಧವಸ್ತವರಾಜ ಭಗವದ್ಗೀತಾ ಭಾಗವತ ಮುಂತಾದ ವೈಷ್ಣವ ಗ್ರಂಥಗಳನ್ನು ಪಠನಮಾಡಿಕೊಂಡು, ಪ್ರಯಾಣ ಮಾಡಿದರೆ ಒಂದು ಹೆಜ್ಜೆಗೆ ಅಶ್ವಮೇಧಫಲವನ್ನು ಪಡೆಯುತ್ತಾರೆ. ಯಾತ್ರೆಯನ್ನು ಮಾಡುತ್ತೇನೆಂದು ಸಂಕಲ್ಪಿಸುವವನ ಪಿತೃಪಿತಾಮಹಾದಿಗಳು ನರಕದಿಂದ ಸ್ವರ್ಗಪದವನ್ನೇರಿ ಗಾನಮಾಡುತ್ತಾರೆ. ಯಾತ್ರಾ ಪ್ರೇರಕನು ವೈಕುಂಠಕ್ಕೆ ಭಾಗಿಯಾಗುವನು. ಯಾತ್ರಿಕರಿಗೆ ಮಾರ್ಗದಲ್ಲಿ ಸ್ಥಳ ಕೊಟ್ಟವನು ತನ್ನ ಪಿತೃಗಳಿಂದ ಕೂಡಿ ಸ್ವರ್ಗಸುಖವನ್ನನುಭವಿಸುವನು. ಮಾರ್ಗದಲ್ಲಿ ಯಾತ್ರಿಕರಿಗೆ ಜಲಮಾತ್ರ ಕೊಟ್ಟವನು ಸಹಸ್ರ ಅರವಟ್ಟಿಗೆಯಲ್ಲಿ ಜಲದಾನ ಮಾಡಿದ ಪುಣ್ಯಕ್ಕೆ ಪಾತ್ರನಾಗುವನು. ವಿಧಿಪುರಸ್ಸರವಾಗಿ ಭಕ್ತನು ಶ್ರೀಕೃಷ್ಣಯಾತ್ರೆಯನ್ನಾಚರಿಸಿದರೆ, ಸರ್ವಕ್ಷೇತ್ರಯಾತ್ರಾಫಲವನ್ನು ಏಕತ್ರ ಲಭಿಸುವನು.

## ಯಾತ್ರಾ ವಿಘ್ನಫಲ.

**ವಿಘ್ನಂ ಸಮಾಚರೇದ್ಯಸ್ತು ಕೃಷ್ಣಯಾತ್ರಾಂ ಪ್ರಕುರ್ವತಾಮ್ । ನರಕೇ ಮಜ್ಜತೇ ಮೂಢಃ ಕಲ್ಪಮಾತ್ರಂ ತು ರೌರವೇ ॥** ರೂ. ಮಾ. ಅ. ೨.

K.963.

ಶ್ರೀಕೃಷ್ಣಯಾತ್ರೆಗೆ ವಿಘ್ನಮಾಡುವವನು ಕಲ್ಪಾವಸಾನ ಪರಿಯಂತ ನರಕದುಃಖವನ್ನುಣ್ಣುವನು. ಯಾರು ಶ್ರೀಕೃಷ್ಣಮಹಿಮೆಗಳಲ್ಲಿಯೂ, ಶ್ರೀ ಮುಖ್ಯಪ್ರಾಣಾವತಾರರಾದ ಶ್ರೀಮಧ್ವಾಚಾರ್ಯರ ಮಹಿಮೆಯಲ್ಲಿಯೂ, ಈ ಕ್ಷೇತ್ರಮಹಿಮೆಯಲ್ಲಿಯೂ ದ್ವೇಷಬುದ್ಧಿಯುಳ್ಳವರೋ ಅಥವಾ ಸಂಶಯಬುದ್ಧಿಯುಳ್ಳವರೋ ಅವರ ಯಾತ್ರಾಫಲವು ವ್ಯರ್ಥವಾಗುವದಲ್ಲದೆ ಆ ಮನುಷ್ಯರು ತಮ್ಮ ಪಿತೃಗಳಿಂದ ಕೂಡಿ ಭಯಂಕರವಾದ ನರಕಕ್ಕೆ ಗುರಿಯಾಗುತ್ತಾರೆ. ಶ್ರೀಕೃಷ್ಣದೇವರ ಯಾತ್ರೆಗೆ ವಿಘ್ನಮಾಡುವ ಪಾಪಿಷ್ಠರ ವಚನವನ್ನು ಯಾರು ಅನುಮೋದಿಸುವರೋ ಅವರು ಕೂಡಾ ನರಕಭಾಗಿಗಳಾಗಿ ನೀಚಯೋನಿಯನ್ನು ಹೊಂದುವರು.

## ಶ್ರೀಕೃಷ್ಣಸೇವಾತತ್ಫಲ.

**ಯಥೋಕ್ತೇನ ವಿಧಾನೇನ ಕಲೌ ಕೃಷ್ಣೈಕಸೇವಯಾ। ಸಕಾಮೋ ಲಭತೇ ಕಾಮಾನ್ನಿಷ್ಕಾಮೋ ಮೋಕ್ಷಮಾಪ್ನುಯಾತ್ ॥** ರೂ. ಮಾ. ಅ. ೧.

ಸರ್ವಾಭೀಷ್ಟದಾತನಾದ ಶ್ರೀಕೃಷ್ಣನಿಗೆ ಕ್ಷೀರಾಭಿಷೇಕಮಾಡಿಸಿದರೆ ಶ್ವೇತದ್ವೀಪವಾಸಕ್ಕೆ ಯೋಗ್ಯನಾಗುತ್ತಾನೆ. ಪಂಚಾಮೃತ ಮಾಡಿಸಿದರೆ ನೂರು ಜನ್ಮಗಳ ಪಾಪಗಳನ್ನು ಕಳೆದುಕೊಳ್ಳುವನು. ವಸ್ತ್ರಪುಷ್ಪ ಸಮರ್ಪಣಗಳಿಂದ ಸಂಪದ್ಭಾಗಿಯಾಗುವನು. ವೇದಾದಿ ಪಾರಾಯಣಗಳಿಂದ ಕಪಿಲಗೋದಾನ ಪುಣ್ಯವನ್ನು ಪಡೆಯುವನು. ಹರಿನಾಮ ಗಾನಮಾಡಿ, ನರ್ತನೆ ಮಾಡುವವನು ಪಿತೃಗಳಿಂದ ಕೂಡಿ, ವೈಕುಂಠದಲ್ಲಿ ವಾಸಮಾಡುವನು. ದೀಪವನ್ನು ಸ್ಥಾಪಿಸುವವನು ಸಾಮ್ರಾಜ್ಯವನ್ನು ಹೊಂದುವನು. ಅಲಂಕಾರಪೂಜೆಯನ್ನು ಮಾಡಿಸುವವನು ವಿಷ್ಣುಲೋಕವನ್ನು ಅಲಂಕರಿಸುವನು. ತುಲಸ್ಯರ್ಚನೆ ಮಾಡಿಸುವವನು ವಿಷ್ಣುಭಕ್ತಿಯನ್ನು ಪಡೆವನು. ಮಹಾಪೂಜೆಯನ್ನು ಮಾಡಿ

ಸುವವನು ವಿಷ್ಣು ಸಾಲೋಕ್ಯವನ್ನು ಹೊಂದುವನು. ರಥೋತ್ಸವವನ್ನು ಮಾಡಿಸುವವನು ಸಾರೂಪ್ಯ ಮೋಕ್ಷಕ್ಕೆ ಪಾತ್ರನಾಗುವನು. ಬ್ರಹ್ಮೋತ್ಸವವನ್ನು ಮಾಡಿಸುವವನು ಸಾಮಿಪ್ಯ ಮುಕ್ತಿಗೆ ಯೋಗ್ಯನಾಗುವನು. ಮಹಾಭಕ್ತಿಯಿಂದ ವೇದಾಂತಾದಿ ಪಾರಾಯಣವನ್ನು ಮಾಡಿ, ಕೃಷ್ಣಾರ್ಪಣ ಮಾಡುವವನು ಭಗವತ್ಪ್ರೀತಿಗೆ ಪಾತ್ರನಾಗುವನು. ಕೃಷ್ಣಸನ್ನಿಧಿಯಲ್ಲಿ ವೇದಾಂತಾದಿ ಪಾರಾಯಣಸಕ್ತರಾದ ಸತ್ಪುರುಷರಿಗೆ ಯಥಾಶಕ್ತಿ ಗೋಪೀಚಂದನ ಮುದ್ರೆ, ದೀಪಾದಿಗಳನ್ನು ದಾನಮಾಡುವವನು ಪ್ರತಿ ಜನ್ಮದಲ್ಲಿಯೂ ವೈಷ್ಣವನಾಗುತ್ತಾನೆ. ಶ್ರೀಕೃಷ್ಣನಿಗೆ ಗೋವನ್ನು ಬಿಡುವವನು ಉತ್ತಮಜ್ಞಾನವನ್ನೂ, ಸಂಪತ್ತನ್ನೂ, ಸಂತಾನವನ್ನೂ ಪಡೆಯುವನು. ಈ ಶ್ರೀಕೃಷ್ಣಸೇವಾ ದ್ರವ್ಯವು ಇಲ್ಲಿ ನಡೆಯುವ ಬ್ರಾಹ್ಮಣಾರಾಧನ ಮುಂತಾದ ಸತ್ಕಾರ್ಯಕ್ಕೆ ಉಪಯುಕ್ತವಾಗಿ ಸೇವಕರಿಗೆ ಆ ಧರ್ಮದ ಪುಣ್ಯಭಾಗವನ್ನು ಸಂಪಾದಿಸಿಕೊಡುವುದು.

## ಶ್ರೀಮುಖ್ಯಪ್ರಾಣಸೇವಾ.

**ಮುದ್ಗಾದಿ ಪಂಚಭಕ್ಷ್ಯೇಣ ನಾನಾಪೂಜಾದಿಭಿರ್ನೃಣಾಮ್ । ದದತಂ ತತ್ತದಿಷ್ಟಾನಿ ಹನೂಮಂತಮುಪಾಸ್ಮಹೇ ॥**

ಶ್ರೀಕೃಷ್ಣಭಕ್ತಾಗ್ರೇಸರನಾದ ಶ್ರೀ ಮುಖ್ಯಪ್ರಾಣನನ್ನು ಪಂಚಾಮೃತಾದಿ ಸೇವೆಗಳಿಂದ ಯಾರು ಪೂಜಿಸುತ್ತಾರೋ ಅವರು ಕೃಷ್ಣನಲ್ಲಿ ದೃಢವಾದ ಭಕ್ತಿಯುಳ್ಳವರಾಗುತ್ತಾರೆ. ಕಾರ್ಯಸಿದ್ಧಿಯನ್ನು ಅಪೇಕ್ಷಿಸುವವರು ಶ್ರೀಮುಖ್ಯಪ್ರಾಣನಿಗೆ ಅಂಕಣ ಪಂಚಕಜ್ಜಾಯಸೇವೆಯನ್ನು ಮಾಡಿಸಿದರೆ ಅಸಾಧ್ಯ ಕಾರ್ಯವನ್ನಾದರೂ ಪ್ರಾಣದೇವನು ಕೈಗೂಡಿಸುವನು. ಯಾತ್ರಾರ್ಥಿಯಾದವನು ಶ್ರೀ ಮುಖ್ಯಪ್ರಾಣನಿಗೂ ಆತನ ಅವತಾರಭೂತರಾದ ಶ್ರೀ ಮಧ್ವಾಚಾರ್ಯರಿಗೂ ವಿಮುಖನಾದರೆ ಪ್ರತ್ಯಕ್ಷವಾಗಿ ವಿಘ್ನಗಳಿಂದ ಪೀಡಿತನಾಗಿ ಯಾತ್ರಾಫಲವನ್ನು ಕಳಕೊಳ್ಳುವನು. ಯಾತ್ರಿಕರು ಶ್ರೀಕೃಷ್ಣನ ಭಕ್ತಾಗ್ರೇಸರರಾದ, ಸರ್ವ

ದೇವತೆಗಳಿಗೆ ಉತ್ತಮರಾಗಿಯೂ, ಗುರುಗಳಾಗಿಯೂ ಶ್ರೀಕೃಷ್ಣಾನುಗ್ರಹದಿಂದ ಸರ್ವಾಭೀಷ್ಟದಾನಸಮರ್ಥರಾಗಿಯೂ ಸರ್ವಜ್ಞರಾಗಿಯೂ ಇರುವ ಶ್ರೀಮುಖ್ಯಪ್ರಾಣದೇವರ ಹನುಮದ್ಭೀಮ ಮಧ್ವಾಖ್ಯ ಅವತಾರತ್ರಯದಲ್ಲಿಯೂ ಸಂಪೂರ್ಣ ಭಕ್ತಿಯಿಟ್ಟು, ಗುರೂತ್ತಮರಾದ ಅವರ ಅನುಗ್ರಹವನ್ನು ಸಂಪಾದಿಸಿಕೊಂಡೇ ಮೋಕ್ಷಕಾರಣವಾದ ಶ್ರೀಕೃಷ್ಣಾನುಗ್ರಹವನ್ನು ಹೊಂದಬೇಕೆನ್ನುವ ಅರ್ಥವನ್ನು ಸರ್ವದಾ ಮನಸ್ಸಿನಲ್ಲಿ ಇಡತಕ್ಕದ್ದು.

## (ಭೋಜನಶಾಲೆ.)

## ಹೆಜ್ಜೆಪಜ್ಜಿ ಮುಖ್ಯಪ್ರಾಣ.

**ವಿಪ್ರಾಣಾಂ ಭೋಜನೈರ್ನಿತ್ಯಂ ಮೋದಮಾನಂ ಹರೇಃ ಪ್ರಿಯಮ್ । ಶ್ರೀಕೃಷ್ಣಾರ್ಪಿತಭೋಕ್ತ್ಯಾಣಾಮಘಘ್ನಂ ಮಾರುತಿಂ ಭಜೇ ॥**

ಪೂರ್ವದಲ್ಲಿ ಜೋಡುಕಟ್ಟೆ ಎಂಬ ಪ್ರದೇಶದ ಸಮೀಪದಲ್ಲಿ ಅಜ್ಜರ (ಅಜರ)ಕಾಡು ಎಂಬಲ್ಲಿ ಒಂದು ಮುಖ್ಯಪ್ರಾಣದೇವಾಲಯವಿತ್ತು. ಅಲ್ಲಿ ಈ ದೇವರ ಸೇವೆಗೆ ಪ್ರತಿದಿನ ಒಂದು ಮುಡಿ ಅಕ್ಕಿ ವೃತ್ತಿ ಇತ್ತು. ಶ್ರೀಕೃಷ್ಣಮಠದಲ್ಲಿ ಬ್ರಾಹ್ಮಣಭೋಜನಾದಿ ವಿನಿಯೋಗಗಳು ಕ್ರಮವಾಗಿ ನಡೆಯುತ್ತಿರುವಲ್ಲಿ ಆ ದೇವಾಲಯದ ಯಜಮಾನನಿಗೆ ರಾತ್ರಿಯಲ್ಲಿ ಸ್ವಪ್ನದಲ್ಲಿ “ನಾನು ನನ್ನ ಸ್ವಾಮಿಯಾದ ಶ್ರೀಕೃಷ್ಣನ ಸನ್ನಿಧಿಯಲ್ಲಿ ವಾಸಮಾಡುತ್ತೇನೆ. ನನ್ನ ಸೇವಾವೃತ್ತಿಗಳನ್ನು ಅಲ್ಲಿಗೆ ಕೊಟ್ಟುಬಿಡು” ಎಂದು ಶ್ರೀ ಪ್ರಾಣದೇವರು ಆಜ್ಞಾಪಿಸಿದರು. ಮರುದಿನ ಆ ಯಜಮಾನನು ಆಜ್ಞೆಯಂತೆ ಶ್ರೀಕೃಷ್ಣಪೂಜಾನಿರತರಾದ ಶ್ರೀಪಾದಂಗಳವರಲ್ಲಿ ವಿಜ್ಞಾಪಿಸಿ ಆ ದೇವರನ್ನೂ ವೃತ್ತಿಯನ್ನೂ ಬಿಟ್ಟುಕೊಟ್ಟನು. ಶ್ರೀಪಾದಂಗಳವರು ಆನಂದದಿಂದ ಶ್ರೀಕೃಷ್ಣಮಠದಲ್ಲಿ ಪ್ರತಿಷ್ಠೆಮಾಡಿಸಿ, ಕ್ರಮವಾಗಿ ನಿತ್ಯಪೂಜೆ ನಡಿಯುವಂತೆ ಮಾಡಿದರು. ಈಗ ಈ ಪ್ರಾಣ

ಗುಡಿಯು ಇತ್ತಲಾಗಿ ವೃಂದಾವನಸ್ಥರಾದ ಶ್ರೀ ಶೀರೂರುಮಠದ ಶ್ರೀ ಲಕ್ಷ್ಮೀಸಮುದ್ರತೀರ್ಥಶ್ರೀಪಾದಂಗಳವರು ಜೀರ್ಣೋದ್ಧಾರ ಮಾಡಿದ ಭೋಜನಶಾಲೆಯ ಒಳಗೆ ಉತ್ತರಪಾರ್ಶ್ವದಲ್ಲಿದೆ. ಇಲ್ಲಿ ಪಂಚಕಜ್ಜಾಯಸೇವೆ ಹಣ್ಣುಕಾಯಿ ಮುಂತಾದವುಗಳಿಂದ ಪ್ರಾಣದೇವರನ್ನರ್ಚಿಸಿ, ಭೋಜನಶಾಲೆಯಲ್ಲಿ ಪ್ರಸಾದ ಸ್ವೀಕರಿಸಿದರೆ ಸರ್ವಪಾಪವೂ ಪರಿಹಾರವಾಗುತ್ತದೆ. ಇಲ್ಲಿ ನೆಲದಲ್ಲಿ ಭೋಜನಮಾಡುವೆನೆಂದು ಹರಿಕೆ ಹೇಳಿಕೊಂಡರೆ ಸುಪುತ್ರಸಂಪತ್ತಿ, ಮಹಾವ್ಯಾಧಿನಾಶ, ಅಶಕ್ಯಕಾರ್ಯಸಿದ್ಧಿ ಮುಂತಾದ ಅಭೀಷ್ಟಸಿದ್ಧಿಯುಂಟಾಗುತ್ತದೆ. ಆ ಪ್ರಸಾದವನ್ನು ದೂಷಿಸಿದವರಿಗೆ ಅನ್ನವು ಮರಣತನಕ ಹುಳುವಾಗಿ ಪ್ರತ್ಯಕ್ಷ ತೋರುತ್ತದೆ. ಇಲ್ಲಿ ಬಹುಜನರು ತಡಿಕೆಯಿಲ್ಲದೆ ರಾತ್ರಿ ಹಗಲು ಭೋಜನಕ್ಕೆ ಕೂಡುವ ಕಾರಣ ಸ್ಥಳ ಸಂಕೋಚದಿಂದ ಹೆಜ್ಜೆಗೊಂದು ಎಲೆ ಹಾಕಿದ ಪ್ರಯುಕ್ತ ಹೆಜ್ಜೆಪಜ್ಜೆಯೆಂದು ಪ್ರಸಿದ್ಧವಾಯಿತು.

## ಸರ್ಪಗುಡಿ.

**ರಕ್ಷಕಂ ಸ್ವರ್ಣಪೂಗಸ್ಯ ವಾದಿರಾಜಪ್ರತಿಷ್ಠಿತಮ್ ।**
**ಗವಾಂ ಕ್ಷೇಮಪ್ರದಂ ನಿತ್ಯಂ ಸರ್ಪರಾಜಂ ನತೋಽಸ್ಮ್ಯಹಂ ॥**

ಈ ಭೋಜನಶಾಲೆಯ ಉತ್ತರಭಾಗದಲ್ಲಿ ಶ್ರೀಕೃಷ್ಣನ ವಸಂತಪೂಜೆಗೆ ಅನುಕೂಲವಾದ ವಸಂತಮಹಲ್ ಎಂಬ ಪ್ರದೇಶದಲ್ಲಿ ಒಂದು ಸರ್ಪದೇವಾಲಯವಿದೆ. ಶ್ರೀಮದ್ವಾದಿರಾಜತೀರ್ಥಶ್ರೀಪಾದಂಗಳವರು ಕೃಷ್ಣದೇವಾಲಯಕ್ಕೆ ಸುವರ್ಣತಗಡನ್ನು ಹಾಕಬೇಕೆಂದು ಯೋಚಿಸಿ, ಸ್ವರ್ಣತಗಡುಗಳನ್ನು ಮಾಡಿಸಿದಾಗ "ಕಲಿಯುಗದಲ್ಲಿ ಈ ಕಾರ್ಯದಲ್ಲಿ ಉದ್ಯೋಗಿಸಬೇಡ"ವೆಂಬ ಶ್ರೀಕೃಷ್ಣನಾಜ್ಞೆಯಿಂದ ಆ ತಗಡುಗಳನ್ನು ಈ ಸ್ಥಳದಲ್ಲಿ ಸ್ಥಾಪಿಸಿ, ಕಲ್ಲಿನ ಮರಿಗೆ ಮುಚ್ಚಿಸಿ, ಅವುಗಳ ರಕ್ಷಣೆಗಾಗಿ ಸರ್ಪರನ್ನು ಸ್ಥಾಪಿಸಿ, ಶ್ರೀಕೃಷ್ಣಾರ್ಪಿತ ಪಂಚಾಮೃತ ಭಕ್ಷ್ಯಭೋಜ್ಯಾದಿಗಳಿಂದ ಆ ಸರ್ಪರನ್ನು ಸದಾ ಪೂಜಿಸುವಂತೆ ನಿಯಮ ಮಾಡಿ

ದರು. ಇದಕ್ಕೆ ದೃಷ್ಟಾಂತವಾಗಿ ಆ ತಗಡುಗಳಲ್ಲಿ ಒಂದು ತಗಡನ್ನು ಶ್ರೀಕೃಷ್ಣದೇವರ ಗರ್ಭಗುಡಿಯ ಮೇಲೆ ದಕ್ಷಿಣಭಾಗದಲ್ಲಿ ಸ್ಥಾಪಿಸಿದ್ದು ಈಗಲೂ ಸ್ಪಷ್ಟವಾಗಿ ತೋರುತ್ತದೆ. ಕೆಲವರು ಶ್ರೀಮದ್ವಾದಿರಾಜತೀರ್ಥರು ನಾಲ್ಕು ಪರ್ಯಾಯ ಮಾಡಿ, ತನ್ನ ಐದನೇ ಪರ್ಯಾಯಪೂಜೆಯನ್ನು ತನ್ನ ಶಿಷ್ಯರಾದ ಶ್ರೀ ವೇದವೇದ್ಯತೀರ್ಥಶ್ರೀಗಳವರಿಗೆ ಕೊಟ್ಟು, ತಾನು ಸೋದಾಕ್ಷೇತ್ರದಲ್ಲಿ ಶ್ರೀಕೃಷ್ಣಪೂಜೆಯನ್ನು ಮಾಡುತ್ತಿದ್ದು ಶ್ರೀವೇದವೇದ್ಯತೀರ್ಥರಿಂದ ಈ ಸರ್ಪಪ್ರತಿಷ್ಠಾಪನಕಾರ್ಯವನ್ನು ಮಾಡಿಸಿದ್ದಾರೆಂದು ಹೇಳುವರು. ಇಲ್ಲಿ ನಾಗರಪಂಚಮಿ, ಸುಬ್ರಹ್ಮಣ್ಯಷಷ್ಠೀ ಈ ದಿವಸಗಳಲ್ಲಿ ರಥೋತ್ಸವ ಬ್ರಾಹ್ಮಣಾರಾಧನ ಮುಂತಾದವುಗಳು ನಡಿಯುತ್ತವೆ. ಸೇವಕರಿಗೆ ಉಚ್ಛಿಷ್ಟಸೇವಾದಿಗಳಿಂದ ಕುಷ್ಠಾದಿರೋಗನಿವೃತ್ತಿ, ಪುತ್ರಪ್ರಾಪ್ತಿ ಮುಂತಾದ ಫಲಗಳೂ ಸುಬ್ರಹ್ಮಣ್ಯದಂತೆ ಇಲ್ಲಿಯೂ ದೊರೆಯುತ್ತವೆ.

## ಗೋಧರ್ಮ.

**ಯಾ ಲಕ್ಷ್ಮೀಃ ಸರ್ವಭೂತೇಷು ಯಾ ಚ ದೇವೇ ವ್ಯವಸ್ಥಿತಾ । ಧೇನುರೂಪೇಣ ಸಾ ದೇವೀ ಮಮ ಪಾಪಂ ವ್ಯಪೋಹತು ॥** ಮಲಮಾಸವಚ.

ಸಾಕ್ಷಾತ್ ಗೋಕುಲವಾಸಿಯಾಗಿಯೂ, ಗೋಪಾಲಕನಾಗಿಯೂ ಇರುವ ಬಾಲಕೃಷ್ಣನೇ ಇಲ್ಲಿರುವನೆಂಬುದಕ್ಕೆ ದೃಷ್ಟಾಂತವಾಗಿ ಪೋಷಣೆಯು ಅಲ್ಪವಾದರೂ ಎಲ್ಲಿ ನೋಡಿದರೂ ಹಿಂಡು ಹಿಂಡಾಗಿ ಬಲಿತಿರುವ ಗೋವುಗಳು ಶ್ರೀಕೃಷ್ಣಸನ್ನಿಧಿಯಲ್ಲಿ ತಿರುಗಾಡುತ್ತಾ ನೋಡುವವರಿಗೆ ಸುಖವನ್ನುಂಟುಮಾಡುವುವು. ಶ್ರೀ ಕೃಷ್ಣಸನ್ನಿಧಿಯಲ್ಲಿ ರಕ್ಷಿಸಲಿಕ್ಕೆ ಅಶಕ್ತರಾದ ಎಷ್ಟೋ ಜನರ ಅನಾಥಗಳಾದ ಗೋವುಗಳು ಕೂಡ ಸುಖವಾಗಿ ರಕ್ಷಿಸಲ್ಪಡುವುವು. ಈಚೆಗೆ ಶ್ರೀಮದದಮಾರು ಮಠದ ಶ್ರೀಮದ್ವಿಬುಧಪ್ರಿಯತೀರ್ಥ ಶ್ರೀಪಾದಂಗಳವರು ಈ ಸರ್ಪ

ಗುಡಿಯ ಹಿಂಭಾಗದಲ್ಲಿ ಶ್ರೀಕೃಷ್ಣನ ಗೋವುಗಳಿಗೆ ಸುಖವಾಗುವಂತೆ ವಿಶಾಲವಾದ ಗೋಶಾಲೆಯನ್ನು ಜೀರ್ಣೋದ್ಧಾರಮಾಡಿಸಿದ್ದಾರೆ. "ಸಾಮಾನ್ಯವಾಗಿ ಗೋವುಗಳಿಗೆ ಆಹಾರ ಕೊಟ್ಟರೆ ಸರ್ವಕಷ್ಟವೂ ಪರಿಹಾರವಾಗುವುದು. ಬಹು ಪುಣ್ಯವು ಲಭಿಸುವುದೆಂದು" ಧರ್ಮಜ್ಞರಾದವರು ತಿಳಿಯದಿರಲಾರರು. ವಿಶೇಷವಾಗಿ ಶ್ರೀಕೃಷ್ಣನ ಗೋವುಗಳಾದುದರಿಂದ ಕಾಮಧೇನುಸಮಾನಗಳಾಗಿರುತ್ತವೆ. ಇವುಗಳ ಸೇವೆಯು ನಿಸ್ಸಂದೇಹವಾಗಿ ಶ್ರೀಗೋಪಾಲಕೃಷ್ಣನ ಅನುಗ್ರಹೋದಯಕ್ಕೆ ಮುಖ್ಯಕಾರಣವು. ಉಡುಪಿ ಶ್ರೀಕೃಷ್ಣ ಸೇವೆಯಲ್ಲಿ ಈ ಸೇವೆಯೂ ಒಂದು ಅಂಗವಾಗಿರುತ್ತದೆ. ಇವುಗಳಿಗೆ ಹುಲ್ಲುಗಳನ್ನು ಹಾಕಿಸುವುದೂ, ಅನ್ನದ ಮುದ್ದೆಯನ್ನು ಕೊಡುವುದೂ ಸರ್ವದುಃಖನಾಶಕರವೂ ಪುಣ್ಯಪ್ರದವೂ ಶ್ರೀಕೃಷ್ಣಪ್ರೀತಿಕರವೂ ಆಗಿರುತ್ತದೆ.

---

# ಶ್ರೀಕೃಷ್ಣಾರ್ಚಕ ಯತಿಸೇವಾ.

**ದೇವದೇವಾಂಶಜಾಶ್ಚೈವ ಕೃಷ್ಣಪಾದಾಂಬುಜಾರ್ಚಕಾಃ । ನ ತೇಷು ದುಷ್ಕೃತಂ ಕಿಂಚಿತ್ಕೃಷ್ಣಪಾದೈಕಸೇವನಾತ್ ॥**

ರೂ. ಮಾ. ಅ ೨.

ಶ್ರೀಕೃಷ್ಣಾರ್ಚಕ ಯತಿಗಳಿಗೆ ಗೋಪೀಚಂದನ, ಕಾವಿಶಾಟಿ, ಛತ್ರ, ಕೌಪೀನ, ಕಮಂಡಲು, ಕೃಷ್ಣಾಜಿನ, ದಂಡಕಾಷ್ಠ, ಪುಸ್ತಕ ಸಮರ್ಪಣಗಳು ಶ್ರೀಮುಖ್ಯಪ್ರಾಣನಲ್ಲಿ ಭಕ್ತಿಯನ್ನು ಕೊಡುವುವು. ಈ ಯತೀಶ್ವರರು ಸಂಸಾರದಲ್ಲಿ ಮುಳುಗಾಡುವ ಭಕ್ತರಿಗೆ ಶ್ರೀಕೃಷ್ಣ ಸೇವಾಪುಣ್ಯವನ್ನು ಕೊಟ್ಟು, ಉದ್ಧರಿಸಲಪೇಕ್ಷೆಯಿಂದ ಕೃಷ್ಣಸೇವೆಗಾಗಿ ನಿರ್ಬಂಧಪಡಿಸುವರು. ಆದರೆ ಅದರಿಂದ ಸ್ವಾರ್ಥವಿರುವುದಿಲ್ಲ ಕೇವಲ ಭಕ್ತರ ದ್ರವ್ಯವನ್ನು ಅನೇಕ ಸೇವಾವಿಶೇಷಗಳಿಂದ ಶ್ರೀಕೃಷ್ಣನಿಗೆ ಅರ್ಪಿಸುವುದೇ ಇವರ ಕರ್ತವ್ಯವು. ಇದರಲ್ಲಿ ಯಾರಾದರೂ ದೋಷಬುದ್ಧಿ ಎಣಿಸಬಾರದು. ಈ ಯತೀಶ್ವರರು ಮಹಾ ಭಾಗವ

ತೋತ್ತಮರು. ಇವರ ಅನುಗ್ರಹವನ್ನು ಸರ್ವಾಭೀಷ್ಟದಾಯಕವೆಂದು ಭಾವಿಸಿ, ಇವರನ್ನು ಸರ್ವಪ್ರಕಾರದಿಂದಲೂ ಸೇವಿಸಿ, ಇವರ ಅನುಗ್ರಹವನ್ನು ಪಡೆಯಬೇಕು.

## ಉಪಸಂಹಾರ.

**ಶ್ರೀಮಧ್ವಸರಸಿ ಸ್ನಾನಂ ಶ್ರೀಕೃಷ್ಣಪದದರ್ಶನಮ್ ।**
**ಶ್ರೀಮಧ್ವಶಾಸ್ತ್ರಸಂಸೇವಾ ಭೂಯಾಜ್ಜನ್ಮನಿ ಜನ್ಮನಿ ॥**

ರೂ. ಮಾ. ಅ. ೨.

ಕಲಿಯುಗದಲ್ಲಿ ಶ್ರೀಕೃಷ್ಣಸೇವೆಯೇ ಮುಖ್ಯವಾದುದು. ಇಲ್ಲಿ ಕಾರ್ತಿಕಾದಿ ಪುಣ್ಯಮಾಸಗಳಲ್ಲಿ ಮಹೋತ್ಸವಕಾಲಗಳಲ್ಲಿ ಮಧ್ವಸರೋವರಸ್ನಾನ, ಶ್ರೀಕೃಷ್ಣಸೇವಾ, ದೀಪಪ್ರಜ್ವಾಲನ, ಶ್ರೀಮನ್ಮುಖ್ಯಪ್ರಾಣಸೇವನ, ಶ್ರೀಕೃಷ್ಣಾರ್ಚಕ ಯತೀಶ್ವರಾರಾಧನ, ಶ್ರೀಕೃಷ್ಣಪ್ರಸಾದಸ್ವೀಕಾರ, ಸದ್ವೈಷ್ಣವರ ಸಂಗ ಇವುಗಳು ಅತಿ ದುರ್ಲಭಗಳು ಮಹಾಫಲಪ್ರದಗಳು. ನೂರಾರು ಜನ್ಮಾರ್ಜಿತ ಪುಣ್ಯಸಮೂಹಗಳಿಂದಲೇ ಲಭ್ಯಗಳಾಗಿವೆ.

### ಉಡುಪಿಕ್ಷೇತ್ರಮಹಿಮಾ ಸಮಾಪ್ತಃ.

**ಕೃಷ್ಣಾಪುರೀಶಶ್ರೀವಿದ್ಯಾಪೂರ್ಣತೀರ್ಥಪದಾಬ್ಜಯೋಃ ।**
**ಶಿಷ್ಯೇಣ ಶ್ರೀನಿವಾಸೇನ ಗ್ರಂಥೋಽಯಂ ತಸ್ಮ್ಯದೇಽರ್ಪ್ಯತೇ ॥**



## ಉಡುಪಿ ಶ್ರೀಕೃಷ್ಣದೇವರ ಸನ್ನಿಧಿಯಲ್ಲಿ ಮಾಡಿಸುವ
## ಸೇವೆಗಳ ಬಗ್ಗೆ ಇಡುವ ಕಾಣಿಕೆ ವಿವರ.*



| ನಂಬ್ರ. | ಸೇವೆಗಳ ಹೆಸರು. | ಮೊಬಲಗು. | | |
|---|---|---|---|---|
| 1. | ಅಖಂಡ ಸಪ್ತರಾತ್ರಿ ಪೂರ್ಣ ಮಹಾರಥೋತ್ಸವ, (ಉತ್ತಮ) | 7000 | 0 | 0 |
| 2. | " " " (ಮಧ್ಯಮ) | 3500 | 0 | 0 |
| 3. | ಉತ್ತಮಕಲ್ಪ ಬ್ರಹ್ಮೋತ್ಸವಕ್ಕೆ . | 1101 | 0 | 0 |
| 4. | ಗರುಡವಾಹನ ಬ್ರಹ್ಮೋತ್ಸವಕ್ಕೆ . | 800 | 0 | 0 |
| 5. | ಮಧ್ಯಮಕಲ್ಪ ಬ್ರಹ್ಮೋತ್ಸವಕ್ಕೆ . | 550 | 0 | 0 |
| 6. | ತೃತೀಯಕಲ್ಪ ಬ್ರಹ್ಮೋತ್ಸವಕ್ಕೆ . | 275 | 0 | 0 |
| 7. | ಗರುಡೋತ್ಸವಕ್ಕೆ . . . | 220 | 0 | 0 |
| 8. | ಉತ್ತಮಕಲ್ಪ ಮಹಾಪೂಜೆಗೆ . | 150 | 0 | 0 |
| 9. | ಮಧ್ಯಮಕಲ್ಪ ಮಹಾಪೂಜೆಗೆ . | 100 | 0 | 0 |
| 10. | ತೃತೀಯಕಲ್ಪ ಮಹಾಪೂಜೆಗೆ . | 60 | 0 | 0 |
| 11. | ಅವಸರಸನಕಾದಿಪೂಜೆಗೆ . . | 30 | 8 | 0 |
| 12. | ಅಲಂಕಾರಪೂಜೆಗೆ . . | 26 | 8 | 0 |
| 13. | ರಾತ್ರಿಪೂಜೆಗೆ . . . | 22 | 8 | 0 |
| 14. | ಸುವರ್ಣ ಮಹಾಕುಂಭಾಭಿಷೇಕ ತೀರ್ಥಪೂಜೆಗೆ | 20 | 8 | 0 |
| 15. | ಶಿಬಿಕ ಡೋಲಾಮಹೋತ್ಸವಕ್ಕೆ . | 18 | 8 | 0 |
| 16. | ಪಂಚಾಮೃತ ಮಹಾಭಿಷೇಕಕ್ಕೆ . | 16 | 8 | 0 |
| 17. | ದೀವಿಟಿಗೆಸೇವೆಗೆ . . . | 13 | 8 | 0 |

* ಪರ್ಯಾಯಪೀಠಾಧಿರೂಢರ ಅಭಿಪ್ರಾಯಾನುಸಾರವಾಗಿ ಮೊಬಲಗು ಸ್ವಲ್ಪಮಟ್ಟಿಗೆ ವ್ಯತ್ಯಾಸವಾಗಲೂ ಬಹುದು.

| | | | | |
|---|---|---|---|---|
| 18. | ಅಭ್ಯಂಗಾರ್ಚನಾ (ಉದ್ವರ್ತನ) . | 12 | 8 | 0 |
| 19 | ಉಷಃಕಾಲಪೂಜೆಗೆ . . | 10 | 8 | 0 |
| 20. | ಏಕಾಂತಸೇವೆಗೆ . . | 9 | 8 | 0 |
| 21. | ಕನಕಾಭಿಷೇಕಕ್ಕೆ . . | 8 | 8 | 0 |
| 22. | ಕ್ಷೀರಾಭಿಷೇಕಕ್ಕೆ . . | 8 | 8 | 0 |
| 23. | ವಿಶ್ವರೂಪಸಂದರ್ಶನಪೂರ್ವಕ ನಿರ್ಮಾಲ್ಯವಿಸರ್ಜನಪೂಜೆಗೆ | 6 | 8 | 0 |
| 24. | ತುಲಸಿ ಅರ್ಚನೆಗೆ . . | 6 | 0 | 0 |
| 25. | ತುಲಸಿಸಮರ್ಪಣೆ ಸಹಾ ಸೇರಿ ಕರ್ಪೂರಮಂಗಳಾರತಿಗೆ | 4 | 4 | 0 |
| 26. | ಗೋಪೂಜೆಗೆ . . | 3 | 8 | 0 |
| 27. | ಫಲಸಮರ್ಪಣೆ ಸಮೇತ ಕರ್ಪೂರಮಂಗಳಾರತಿಗೆ | 3 | 4 | 0 |
| 28. | ಹಾಲುಬೆಣ್ಣೆಪೂಜೆಗೆ . . | 2 | 8 | 0 |
| 29. | ಕರ್ಪೂರಮಂಗಳಾರತಿಗೆ . . | 1 | 4 | 0 |
| 30. | ಆಕಳತುಪ್ಪ ನಂದಾದೀಪ ಒಂದಕ್ಕೆ | 262 | 0 | 0 |
| 31. | ಎಣ್ಣೆ ನಂದಾದೀಪ ಒಂದಕ್ಕೆ . | 132 | 0 | 0 |
| 32. | ದೀಪಸ್ತಂಭ . . . | 36 | 0 | 0 |
| 33. | ವಿಷ್ಣುಪಂಚಕಾದಿ ಉದ್ಯಾಪನ ಹವನಕ್ಕೆ | 20 | 0 | 0 |
| 34. | ಇತರ ಹವನಕ್ಕೆ . . | 40 | 0 | 0 |

